# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

ಚಂದಮಾಮದಲ್ಲಿ ಪ್ರಾರಂಭವಾಗಿರುವ "ಕಥಾ ಶೀರ್ಷಿಕೆಯ ಸ್ಪರ್ಧೆ" ಓದುಗರನ್ನು ಬಹಳವಾಗಿ ಆಕರ್ಷಣೆ ಮಾಡಿದೆ. ಫೋಟೋ ಶೀರ್ಷಿಕೆ, ಕಥಾ ಶೀರ್ಷಿಕೆಗಳ ಸ್ಪರ್ಧೆಯಲ್ಲಿ ಭಾಗವಹಿಸುವವರು ಕಾರ್ಡಿನಲ್ಲೇ ಬರೆಯಬೇಕಲ್ಲದೆ ಕವರು ಮುಂತಾದುವುಗಳನ್ನು ಉಪಯೋಗಿಸಬಾರದು. ಅವುಗಳನ್ನು ಬಿಡಿಸಿ ನೋಡಲು ಸಾಧ್ಯವಾಗದು. ಕಥಾ ಶೀರ್ಷಿಕೆ ಬರೆಯುವವರು ಕಥೆಯನ್ನು ಬರೆಯಬಾರದು. ಯಾವುದೋ ಒಂದು ಶೀರ್ಷಿಕೆ ಮಾತ್ರ ಬರೆದು, ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ಬರೆದು ಕಳುಹಿಸಿದರೆ ಸಾಕು. ಕೆಲವರು ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳನ್ನು ಬರೆದು ಕಳುಹಿಸುತ್ತಾರೆ. ಹಾಗೂ ಮಾಡಕೂಡದು. ಯಾವುದೋ ಒಂದನ್ನು ಬರೆಯುವವರೇ ನಿರ್ಧರಿಸಿ ಅದನ್ನು ಮಾತ್ರ ಬರೆಯತಕ್ಕದ್ದು. ಈ ವಿಷಯಗಳನ್ನು ಯಾರೂ ಮರೆಯಬಾರದು.

ಸಂಪುಟ: ೨೮ ಫೆಬ್ರುವರಿ '೭೭ ಸಂಚಿಕೆ: ೨

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦











ಅನಭಿಜ್ಞಾನ ಶಾಸ್ತ್ರಾರ್ಥಾನ್
ಪುರುಷಾಃ ಪಶುಬುದ್ಧಯ
ಪ್ರಾಗಲ್ಭ್ಯಾದ್ವಕ್ತುಮಿಚ್ಛಂತಿ
ಮಂತ್ರೇಷ್ವಭ್ಯಂತರೀ ಕೃತಾಃ ೧.

ಶಾಸ್ತ್ರಾರ್ಥಗಳನ್ನು ತಿಳಿಯದ ಪಶುಸಮಾನರಾದವರು ಕೂಡ ಸಮಾಲೋಚನೆಯ ಸಭೆಯಲ್ಲಿ ತೂರಿ ಭಾರಿ ತಿಳಿದವರಂತೆ ಮಾತಾಡುತ್ತಾರೆ.

ಅಶಾಸ್ತ್ರ ವಿದುಷಾಂತೇಷಾಂ
ನ ಕಾರ್ಯಮಹಿತಂ ವಚಃ
ಅರ್ಥಶಾಸ್ತ್ರಾನಭಿಜ್ಞಾನಾಂ
ವಿಪುಲಾಂ ಶ್ರಿಯಮಿಚ್ಛತಾಂ ೨.

ಈ ಬಗೆಯ ಶಾಸ್ತ್ರವಿಮೂಢರ ಮಾತುಗಳು ಕೇಡನ್ನೇ ಮಾಡುತ್ತವೆ. ಒಳಿತನ್ನು ಬಯಸುವವರು ಅಂತಹರ ಮಾತುಗಳನ್ನು ಕೇಳಬಾರದು.

ಅಹಿತಂ ಚ ಹಿತಾಕಾರಂ
ದಾರ್ಷ್ಟ್ಯಾಜ್ಜಲ್ಪಂತಿಯೇ ನರಾಃ
ಅಪೇಕ್ಷ್ಯ ಮಂತ್ರಬಾಹ್ಯಾಸ್ತೇ
ಕರ್ತವ್ಯಾಃ ಕೃತದೂಷಣಾಃ ೩.

ಯಾರು ತಮ್ಮ ಪ್ರಗಲ್ಭ ಮಾತುಗಳಿಂದ ಅಹಿತವಾದುದನ್ನು ಹಿತವೆನಿಸುವ ಹಾಗೆ ಹೇಳುವರೋ, ಅವರನ್ನು ಮುಂದಾಗಿ ಪರೀಕ್ಷಿಸಿ ಮಂತ್ರಾಲೋಚನೆಯಿಂದ ಬಹಿಷ್ಕರಿಸಬೇಕು.

---

ಕೆಟ್ಟ ಮಂತ್ರಿಗಳು

---






ಕಾಗೆ, ಆಮೆ ಮತ್ತು ಇಲಿ ಇವು ಮೂರೂ ಒಂದನ್ನೊಂದು ಅರ್ಥಮಾಡಿಕೊಂಡು ಸ್ನೇಹದಿಂದ ಸಂತೋಷವಾಗಿ ಕಾಲ ಕಳೆಯುತ್ತಿದ್ದುವು.

ಒಂದು ದಿನ ಆ ಮೂರು ಸ್ನೇಹಿತ ಪ್ರಾಣಿಗಳೂ ಒಟ್ಟಿಗಿದ್ದು ಅದೂ ಇದೂ ಮಾತುಕತೆಯಾಡುತ್ತಿರಲು, ಚಿತ್ರಾಂಗವೆಂಬೊಂದು ಜಿಂಕೆ, ಯಾರೋ ಬೇಟೆಗಾರರು ಓಡಿಸಿಕೊಂಡು ಬರುವವರಂತೆ ಓಡುತ್ತಾ ಬಂದು ಆ ಸರೋವರದೊಳಗೆ ಬಿದ್ದು ಬಿಟ್ಟಿತು. ಅದರಹಿಂದೆ ಬೇಟೆಗಾರರು ಬರುವರೇನೋ ಎಂಬ ಭಯದಿಂದ ಆಮೆ ತಟಕ್ಕನೆ ನೀರಿನೊಳಗೆ ಹಾರಿತು; ಇಲಿಬಿಲದೊಳಗೆ ನುಸುಳಿಕೊಂಡಿತು, ಕಾಗೆ ಸಮೀಪದಲ್ಲಿದ್ದ ಮರದ ಮೇಲೆ ಹಾರಿತು.

ಕಾಗೆ ಸುತ್ತುಮುತ್ತೂ ನೋಡುತ್ತಿರಲು, ಎಷ್ಟು ಹೊತ್ತಾದರೂ ಅಲ್ಲಿಗೆ ಯಾರೂ ಬರುವಂತೆ ಕಾಣಲಿಲ್ಲ. ನೀರಿಗೆ ಬಿದ್ದ ಜಿಂಕೆ ಎದ್ದು ತಬ್ಬಿಬ್ಬಾಗಿ ನಿಂತು ಗಬಗಬನೆ ನೀರು ಕುಡಿಯ ತೊಡಗಿತು. ಅದನ್ನು ನೋಡಿ ಕಾಗೆ ತನ್ನ ಮಿತ್ರರಾದ ಇಲಿಯನ್ನೂ, ಆಮೆಯನ್ನೂ ಕರೆದು, "ಏನೂ ಭಯವಿಲ್ಲ. ಬೇಟೆಗಾರರಾರೂ ಜಿಂಕೆಯನ್ನು ಓಡಿಸಿಕೊಂಡು ಬರಲಿಲ್ಲ, ಅದು ವಿಪರೀತ ಬಾಯಾರಿಕೆಯಿಂದ ನೀರು ಹುಡುಕುತ್ತಾ ಓಡಿ ಬಂದಿದೆ." ಎಂದಿತು.

ಅದಕ್ಕೆ ಮಂಥರಕ ಆಮೆ ಹೀಗೆಂದಿತು: "ಮಿತ್ರಾ, ನಿನ್ನ ಆಲೋಚನೆ ಸರಿಯಲ್ಲ. ಬೇಟೆಗಾರರು ಓಡಿಸಿಕೊಂಡು ಬಂದರೆಂದು ಅದರ ಮುಖನೋಡಿದರೇ ಗೊತ್ತಾಗುತ್ತದೆ. ಅಷ್ಟೊಂದು ವೇಗದಿಂದ ಅದು ಓಡುತ್ತಾ ಬರುವಾಗಲೂ ಭಯದಿಂದ ತಿರುಗಿ ತಿರುಗಿ ನೋಡುತ್ತಿತ್ತು. ಅದರ ಗುಂಡಿಗೆ ಅತಿವೇಗವಾಗಿ ಹೊಡೆದು ಕೊಳ್ಳುತ್ತಿದೆ ನೋಡು. ಪ್ರಾಣ ಭೀತಿಯಿಂದ ಓಡುತ್ತಿರುವವರಲ್ಲೇ ಅಂತಹ ಲಕ್ಷಣಗಳು ಕಾಣುತ್ತವೆ. ಅದಕ್ಕೆ ನಿಜವಾಗಿಯೂ ದಾಹವೇ ಆಗಿದ್ದರೆ ಹಾಗೆ ಓಡಿಬರುವ ಅಗತ್ಯವಿದ್ದಿಲ್ಲ" ಎಂದು ಹೇಳಿ, ಚಿತ್ರಾಂಗದ ಕಡೆಗೆ ತಿರುಗಿ "ಮಿತ್ರನೇ, ನಾನು ಹೇಳಿದ್ದು ನಿಜವಲ್ಲವೆ ?" ಎಂದುಕೇಳಿತು. ಹಾಗೆಯೇ ತಮ್ಮೆಲ್ಲರ ಪರಿಚಯವನ್ನೂ ಮಾಡಿಸಿತು.

ಚಿತ್ರಾಂಗವು, ಆಮೆಯನ್ನು ನೋಡಿ, "ಮಂಥರಕಾ, ನನ್ನ ಭಯಕ್ಕೆ ಕಾರಣವನ್ನು ಸರಿಯಾಗಿಯೇ

ಹಿಂಬದಿಯ ಚಿತ್ರಕಥೆ

ಊಹಿಸಿರುವೆ. ಅನೇಕ ಮಂದಿ ಬೇಟೆಗಾರರು ನನ್ನನ್ನು ಹಿಡಿಸಿಕೊಂಡು ಬಂದರು. ಅವರು ನನ್ನ ಮೇಲೆ ಬಿಟ್ಟ ಬಾಣಗಳು ಕೂದಲೆಳೆಯಷ್ಟರಲ್ಲಿ ತಪ್ಪಿಹೋಗಿವೆ. ಆ ದುಷ್ಟರು ನಮ್ಮ ಮಂದೆಯನ್ನೇ ಮುತ್ತಿಕೊಂಡುಬಿಟ್ಟರು. ನಾನೊಬ್ಬ ತಪ್ಪಿಸಿಕೊಂಡು ಇಲ್ಲಿಗೆ ಬಂದೆ. ನನ್ನನ್ನು ನಿಮ್ಮ ಸ್ನೇಹಿತನೆಂದು ತಿಳಿದು ಕಾಪಾಡಿರಿ." ಎಂದಿತು.

"ಒಳ್ಳೆಯದು ಚಿತ್ರಾಂಗಾ. ನೀನು ಇಲ್ಲಿಯೇ ಇದ್ದುಬಿಡು, ನಮಗಿರುವುದರಲ್ಲಿ ನಿನಗೂ ಒಂದು ಭಾಗ ಹಂಚಿಕೊಳ್ಳೋಣ. ಶತ್ರುಗಳಿಂದ ಕಾಪಾಡ ಬೇಕೆಂದು ಹೇಳಿದೆಯಷ್ಟೆ? ಅಂತಹ ಕಾರ್ಯಕ್ಕೆ ಮುಖ್ಯವಾಗಿ ಕಾಲಿನ ಬಲವೂ, ಭುಜಬಲವೂ ಬೇಕು. ನಾವು ಬೇಗನೇ ದಟ್ಟವಾದ ಕಾಡಿನೊಳಗೆ ಹೋಗಿ ಬಿಡಬೇಕು. ಬಲವಿಲ್ಲದವರಿಗೆ ಅದಕ್ಕಿಂತ ಸುರಕ್ಷಿತವಾದ ಸ್ಥಳ ಬೇರೊಂದಿಲ್ಲ" ಎಂದಿತು ಆಮೆ.

ಕಾಗೆ ಮರದ ಮೇಲೆ ಹಾರಿ ನಾಲ್ಕು ಸುತ್ತಲೂ ನೋಡಿ, "ಬೇಟೆಗಾರರು ಅವರ ಶಿಬಿರಕ್ಕೆ ಹೊರಟು ಹೋಗುತ್ತಿದ್ದಾರೆ. ಸದ್ಯದಲ್ಲಿ ಭಯವೇನಿಲ್ಲ. ಈ ಉರಿಬಿಸಿಲಿನ ವೇಳೆಯಲ್ಲಿ ಈ ದೊಡ್ಡ ಮರದ ಕೆಳ ಗಿರುವ ತಣ್ಣಗಿನ ನೆರಳಿನಲ್ಲಿ ಸುಖವಾಗಿ ಕಾಲಕ್ಷೇಪ ಮಾಡಬಹುದು" ಎಂದಿತು. "ನಿಮ್ಮಂತಹ ಒಳ್ಳೆಯ ವರ ಸ್ನೇಹದಿಂದ ತಬ್ಬಲಿಯಾದ ನನಗೆ ಎಷ್ಟೋ ಧೈರ್ಯ ಬಂದಿದೆ" ಎಂದಿತು ಚಿತ್ರಾಂಗ.

"ನಾವು ತೀರಾ ಅಲ್ಪಪ್ರಾಣಿಗಳಾಗಿದ್ದೇವೆ. ನಮ್ಮ ಸ್ನೇಹ ನಿನಗೆ ಹೇಗೆ ಉಪಕಾರ ಮಾಡಬಲ್ಲುದು? ರಕ್ಷಣೆ ಬಯಸುವವರು ಬಲವಂತರಾದ ಮಿತ್ರರನ್ನಲ್ಲವೇ ಬಯಸುತ್ತಾರೆ?" ಎಂದು ಮಂಥರಕವು ಕೇಳಿತು. "ಮಿತ್ರರ ವಿಷಯ ನನಗೆ ಸ್ವಲ್ಪ ಗೊತ್ತಿದೆ. ಮಿತ್ರರು ಅತ್ಯಲ್ಪರಾದರೂ ದೊಡ್ಡವರಿಗೆ ಕೂಡ ಸಹಾಯಮಾಡಬಹುದು. ಆನೆಯನ್ನು ಅಪಾಯ ದಿಂದ ಬಿಡುಗಡೆ ಮಾಡಿದ ಇಲಿಗಳ ಕಥೆ ಆದೇ ಅಲ್ಲವೇ?" ಎಂದಿತು ಜಿಂಕೆ. ಆ ಕಥೆ ಏನೆಂದು ಮಂಥರಕವು ಕೇಳಲು, ಚಿತ್ರಾಂಗವು ಹೀಗೆಂದಿತು:



## ಆನೆಯನ್ನು ಕಾಪಾಡಿದ ಇಲಿಗಳು

ಒಂದು ಅರಣ್ಯದಲ್ಲಿ ಒಂದು ಶಿಥಿಲಾಲಯವಿದ್ದಿತು. ಅದರಲ್ಲಿ ಲಕ್ಷೋಪಲಕ್ಷ ಇಲಿಗಳು ತಮ್ಮಿಷ್ಟ ಪ್ರಕಾರ ಬಿಲಗಳನ್ನು ನಿರ್ಮಿಸಿಕೊಂಡು ಸುಖವಾಗಿದ್ದುವು.

ಒಂದು ಸಾರಿ ಮಳೆ ಬೀಳದೆ ನೀರಿನ ಬರ ಬಂದಿತು. ಒಂದು ದಿನ ಆನೆಗಳ ರಾಜ ತನ್ನ ಮಂದೆಯೊಂದಿಗೆ ನೀರನ್ನು ಹುಡುಕುತ್ತಾ ಶಿಥಿಲಾಲಯದ ಮುಂದಿರುವ ತುಂಬಿದ ಕೆರೆಯ ಬಳಿಗೆ ಬಂದಿತು. ಅದರ ಹಿಂದೆಯೇ ಆನೆಗಳ ಮಂದೆಯೇ ಬಂದಿತು. ಶಿಥಿಲಗಳ ಮಧ್ಯದಲ್ಲಿ ಆ ಆನೆಗಳು ನಡೆದಾಡುತ್ತಿರಲು, ಅನೇಕ ಇಲಿಗಳು ಅವುಗಳ ಕಾಲಡಿಯಲ್ಲಿ ನಜ್ಜುಗುಜ್ಜಾದುವು. ದಿನಾ ಹೀಗಾಗುವುದನ್ನು ನೋಡಿ, ಇಲಿಗಳು ಸಭೆಕೂಡಿಸಿ ತಮಗೆ ಉಂಟಾದ ಪ್ರಾಣಭಯವನ್ನು ಕುರಿತು ಚರ್ಚಿಸತೊಡಗಿದುವು. ಕಡೆಗೆ ಗಜರಾಜನೊಂದಿಗೆ ಮಾತಾಡುವುದೆಂದು ತೀರ್ಮಾನಿಸಿಕೊಂಡುವು. ಒಂದು ಮುದಿ ಇಲಿ, "ಓ ಗಜರಾಜನೇ, ನಮ್ಮ ಮೇಲೆ ನೀವೆಲ್ಲಾ ಭೂತದಯೆ ತೋರಿಸಬೇಕು. ನಾವು ಎಷ್ಟೇ ಕ್ಷುದ್ರ ಪ್ರಾಣಿಗಳಾದರೂ ನಮ್ಮಿಂದಲೂ ನಿಮಗೆ ಏನಾದರೂ ಪ್ರಯೋಜನವಾದೀತು." ಎಂದಿತು. ಅದನ್ನು ಕೇಳಿ, ಆನೆಗಳ ರಾಜನು ನಕ್ಕು, ಇಲಿಗಳ ಕೋರಿಕೆಯನ್ನು ಮನ್ನಿಸಿದ. ಆಮೇಲೆ ಆನೆಗಳು ಶಿಥಿಲಾಲಯದ ಮಧ್ಯದಲ್ಲೆಲ್ಲಾ ನಡೆದಾಡುವುದನ್ನು ಬಿಟ್ಟು, ಕೆರೆಯ ಕಡೆಗೆ ಸುತ್ತು ದಾರಿಯಿಂದ ಬಂದು ಹೋಗುತ್ತಿದ್ದುವು.

ಅಲ್ಲಿಗೆ ಸಮೀಪದಲ್ಲಿರುವ ಒಬ್ಬ ರಾಜನಿಗೆ ಈ ಆನೆಗಳ ಸಮಾಚಾರ ಗೊತ್ತಾಯಿತು. ಅವನು ತನ್ನ ಆಳುಗಳನ್ನು ಕಳುಹಿಸಿ ನೀರಿನಲ್ಲಿ ಆನೆಗಳನ್ನು ಹಿಡಿಯಲಿಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡಿಸಿದನು. ಆನೆಗಳು ನೀರು ಕುಡಿಯಲು ಬಂದು, ಕೆರೆಯಲ್ಲಿರುವ ಉರುಳುಗಳನ್ನು ಕಾಣದೆ ಸಿಕ್ಕಿಕೊಂಡು ಎಳೆದಾಡಿ ಉರುಳುಗಳು ಬಿಗಿದುಕೊಳ್ಳಲು ಅಲ್ಲಲ್ಲೇ ಬಿದ್ದುವು. ಇದನ್ನು ನೋಡಿ ಆನೆಗಳ ರಾಜನಿಗೆ ಇಲಿಗಳು ಹೇಳಿದ ಮಾತು ನೆನಪಾಯಿತು. ಅವನು ಸಿಕ್ಕಿಬೀಳದ ಕೆಲವು ಆನೆಗಳನ್ನು ಇಲಿಗಳ ಬಳಿಗೆ ಕಳುಹಿಸಿದ. ಸಂಗತಿ ತಿಳಿದ ಇಲಿಗಳು ಕೆರೆಗೆ ಬಂದು ಆನೆಗಳ ದೀನ ಪರಿಸ್ಥಿತಿಯನ್ನು ನೋಡಿದವು. ಕೂಡಲೇ ಲಕ್ಷೋಪಲಕ್ಷ ಇಲಿಗಳು ತಮ್ಮ ಹರಿತವಾದ ಹಲ್ಲಿನಿಂದ ಆನೆಗಳನ್ನು ಬಂಧಿಸಿದ ಹಗ್ಗದ ಉರುಳುಗಳನ್ನು ಕಡಿದು ಮುಕ್ತ ಮಾಡಿದುವು.

ಆಗ ಆನೆಗಳ ರಾಜ ಅತ್ಯಾನಂದದಿಂದ, ತನ್ನ ಅನುಚರರನ್ನು ನೋಡಿ "ಸ್ನೇಹ ಮಾಡಿರಿ, ಸ್ನೇಹ ಮಾಡಿರಿ! ಎಷ್ಟೇ ದುರ್ಬಲ ಮಿತ್ರರಾದರೂ ಕಷ್ಟದಲ್ಲಿ ಸಹಾಯಕರಾಗುವರು!" ಎಂದು ಹೇಳಿತು.



## ೧೮೧. ಅತಿ ಪ್ರಾಚೀನ ವೃಕ್ಷ

ಆರಿಜೋನಾ ರಾಷ್ಟ್ರದಲ್ಲಿ ಅನೇಕ ಕೋಟಿ ವರ್ಷಗಳ ಹಿಂದೆ ಅರಣ್ಯಗಳಿದ್ದುವು. ಭಾರೀ ಭಾರೀ ಮರಗಳಿದ್ದುವು. ಕಾಲಕ್ರಮದಲ್ಲಿ ಅವೆಲ್ಲಾ ಶಿಲೀಭೂತವಾಗಿ ಫಾಸಿಲ್ ರೂಪ ಧರಿಸಿದುವು. ಅಹಲ್ಯೆಯನ್ನು ಶಿಲೆಯಾಗುವಂತೆ ಗೌತಮನು ಶಪಿಸಿದನು. ಆದರೆ ಕಾಲವು ಜೀವವಿರುವ ಪ್ರತಿಯೊಂದನ್ನೂ ಶಿಲೆಯಾಗಿ ಮಾಡಬಲ್ಲುದು. ಹಾಗೆ ಶಿಲೆಯಾಗಿ ಹೋದ ಮಹಾವೃಕ್ಷದ ಚಿತ್ರವಿದು.





# ವಿಜಯಸಾಧನೆ

ಕೆಡೆತನಕ ಹಿಡಿದ ಕೆಲಸ ಮುಗಿಸದೆ ಬಿಡಲಾರೆನೆಂಬ ದೃಢಶಾಲಿಯಾದ ರಾಜಾ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ತನ್ನ ಭುಜದ ಮೇಲೆ ಹೊತ್ತುಕೊಂಡು ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ. ಒಂದುವೇಳೆ ನೀನು ಈ ಸಾಹಸ ಪ್ರಯತ್ನಕ್ಕೆ ತಕ್ಕ ಫಲವನ್ನು ಪಡೆದೆಯಾದರೆ ಅದನ್ನು ಬಿಟ್ಟುಬಿಡ ಬೇಡ. ಕೆಲವರು ಶ್ರಮಪಟ್ಟು ವಿಜಯವನ್ನು ಸಾಧಿಸಿ ಅದರಿಂದ ಸಿಕ್ಕಿದ ಪ್ರಯೋಜನವನ್ನು ಒದ್ದು ಬಿಸುಡು ತ್ತಾರೆ. ಇದಕ್ಕೆ ನಿದರ್ಶನವಾಗಿ ನಿನಗೆ ವಿಶ್ವನಾಥ ನೆಂಬ ಕೃಷೀವಲನ ಕಥೆ ಹೇಳುತ್ತೇನೆ. ದಾರಿಯ ಶ್ರಮ ತಿಳಿಯಂತೆ ಕೇಳುತ್ತಾ ನಡೆ" ಎಂದು ಕಥೆ ಯನ್ನು ಪ್ರಾರಂಭಿಸಿತು:

ಚಿತ್ರಕೂಟವೆಂಬ. ದೇಶದ ಒಂದು ಊರಿನಲ್ಲಿ ಶ್ರೀನಾಥನೆಂಬ ಕೃಷಿಕನಿಗೆ ಮಗನಾಗಿ ವಿಶ್ವನಾಥನು ಹುಟ್ಟಿದನು. ಯಾವ ಪೂರ್ವಜನ್ಮ ಪುಣ್ಯ ವಿಶೇಷ ದಿಂದಲೋ ಅವನಿಗೆ ಚಿಕ್ಕಪ್ರಾಯದಿಂದಲೇ ಸಂಗೀತದ

---

ಬೇತಾಳಕಥೆಗಳು

---

ಮೇಲೆ ತುಂಬ ಅಭಿರುಚಿಯೂ ಹಾಡುವ ಸಾಮರ್ಥ್ಯವೂ ಕಂಡುಬಂದಿತು. ಅದನ್ನು ನೋಡಿ ಅವನ ತಂದೆ ಅವನ ಇಷ್ಟದಂತೆ ತಿರುಗಾಡಿ ಸಂಗೀತ ಕಲಿಯಲು ಎಡೆಮಾಡಿ ಕೊಟ್ಟನು.

ಆ ವಿಧವಾಗಿ ಬೆಳೆಯುತ್ತ ವಿಶ್ವನಾಥನು ಒಳ್ಳೆಯ ವೈಣಿಕನಾಗಿ ಪ್ರಾವೀಣ್ಯತೆ ಪಡೆದನು. ಆಮೇಲೆ ಮನೆಯಲ್ಲೇ ಇದ್ದು ಹಗಲಿಡೀ ತಂದೆಯೊಂದಿಗೆ ವ್ಯವಸಾಯ ಕೆಲಸಗಳನ್ನು ಮಾಡುತ್ತ, ಸಾಯಂಕಾಲ ವಾದ ಮೇಲೆ ಮನೆಯ ಜಗಲಿಯಲ್ಲಿ ವೀಣೆ ಬಾರಿಸುತ್ತ, ಹಾಡಿಕೊಂಡು ಆನಂದಿಸುವನು. ಅವನಿಂದ ಹೊರಡುವ ನಾದಗಳು ಕೇಳುವವರ ಮೈ ಮರೆಸುವಂತಹುದು.

ಹಾಗಿರುವಾಗ ವಿಶ್ವನಾಥನಿಗೆ ತಕ್ಕ ಕನ್ಯೆಯೊಂದಿಗೆ ಮದುವೆಯೂ ಆಯಿತು. ಅವನ ಹೆಂಡತಿ ಮೀನಾಕ್ಷಿಗೆ ತನ್ನ ಗಂಡನು ಬರಿಯ ಕೃಷಿಕನಾಗಿಲ್ಲದೆ, ಎಲ್ಲರನ್ನೂ ಆನಂದಪರವಶಮಾಡುವಂತಹ ವೈಣಿಕನಾಗಿರುವುದನ್ನು ನೋಡಿ ಬಹಳ ಸಂತೋಷವಾಗಿತ್ತು.

ವಿಶ್ವನಾಥನು ಸಾಯಂಕಾಲದ ಹೊತ್ತಿನಲ್ಲಿ ವೀಣಾನಾದದೊಂದಿಗೆ ಹಾಡುತ್ತಿರುವಾಗ, ಅದನ್ನು ಕೇಳಲು ಕೂಡುವ ಜನರಲ್ಲಿ ಒಳ್ಳೆಯ ಸಂಗೀತಗಾರರು ಕೂಡಾ ಇದ್ದರು. ಅಂತಹವರು ಸಹಾ ಮೆಚ್ಚುವಂತಿತ್ತು ವಿಶ್ವನಾಥನ ಸಂಗೀತ.

ಅನೇಕಮಂದಿ ವಿಶ್ವನಾಥನೊಂದಿಗೆ, "ಇಂತಹ ಸಂಗೀತ ಸಂಪನ್ನನಾದ ನಿನ್ನನ್ನು ಯಾವ ರಾಜನಾದರೂ ಆಸ್ಥಾನದಲ್ಲಿಟ್ಟುಕೊಳ್ಳದೆ ಬಿಡಲಾರ. ಇಡೀ ದಿನ ಸೊಂಟ ಮುರಿದು ವ್ಯವಸಾಯ ಮಾಡಿ ಒದ್ದಾಡುವ ಕಷ್ಟ ನಿನಗೇಕೆ ? " ಎಂದರು.

ಮೀನಾಕ್ಷಿಯ ಮನಸ್ಸಿನಲ್ಲಿ ಕೂಡಾ ಅಂತಹುದೇ ಉದ್ದೇಶವಿದ್ದಿತು. ಆದರೆ ವಿಶ್ವನಾಥನಿಗೆ ರಾಜಾಸ್ಥಾನಗಳಲ್ಲಿ ಗೌರವ ಪಡೆಯಬೇಕೆಂಬ ಆಶೆಯೇನೂ ಇರಲಿಲ್ಲ, ಅದಕ್ಕಾಗಿ ಯಾರ ಆಶ್ರಯ ಪಡೆಯಬೇಕೆಂದೂ, ಹೇಗೆ ತನ್ನ ಸಂಗೀತದ ಪ್ರದರ್ಶನ ಮಾಡಬೇಕೆಂದೂ ಅವನು ಕನಸು ಮನಸಿನಲ್ಲಿಯೂ ನೆನೆದವನಲ್ಲ. ಇದನ್ನು ತಿಳಿದಿದ್ದ ಮೀನಾಕ್ಷಿ ತನ್ನ ಅಭಿಪ್ರಾಯ



ವನ್ನು ಗಂಡನಿಗೆ ಬಾಯಿ ಬಿಡಲೂ ಇಲ್ಲ. ಆದರೆ ಅವಳ ಕೋರಿಕೆ ಯಾವ ಪ್ರಯತ್ನವೂ ಶಿಫಾರಸೂ ಇಲ್ಲದೆಯೇ ನೆರವೇರಿಬಿಟ್ಟಿತು. ಒಂದು ದಿನ ವಿಶ್ವನಾಥನು ಜಗಲಿಯಲ್ಲಿ ಕುಳಿತು ವೀಣಾಗಾನ ಮಾಡುತ್ತಿದ್ದಾಗ, ಯಾರೋ ಇಬ್ಬರು ಮನುಷ್ಯರು ಎಲ್ಲಿಂದಲೋ ಪ್ರಯಾಣ ಮಾಡಿ ಬಂದವರು, ವಿಶ್ವನಾಥನ ಸಂಗೀತವನ್ನು ಕೊನೆವರೆಗೂ ಇದ್ದು ಅತ್ಯಂತ ಶ್ರದ್ಧೆಯಿಂದ ಕೇಳಿ ತಲೆ ದೂಗಿ ಹೊರಟುಹೋದರು. ಅವರು ಮಾರು ವೇಷದಲ್ಲಿದ್ದ ಆ ದೇಶದ ರಾಜನೂ ಮಂತ್ರಿಯೂ ಹೊರತು ಬೇರೆ ಯಾರೂ ಅಲ್ಲವೆಂದು ಕೆಲವು ದಿನಗಳ ಮೇಲೆ ಗೊತ್ತಾಯಿತು.

ರಾಜನು ವಿಶ್ವನಾಥನನ್ನು ತುಂಬ ಗೌರವದಿಂದ ತನ್ನ ಬಳಿಗೆ ಕರೆಯಿಸಿ, ಅವನಿಗೆ ತನ್ನ ಆಸ್ಥಾನದಲ್ಲಿ ಸಂಗೀತ ವಿದ್ವಾಂಸನ ಪದವಿಯನ್ನು ಕೊಟ್ಟನು. ಮೊದಮೊದಲು ವಿಶ್ವನಾಥನಿಗೆ ರಾಜಾಸ್ಥಾನವು ಒಂದು ಸೆರೆಮನೆಯಂತೆ ತೋರಿದರೂ, ಬರುಬರುತ್ತ ದೊಡ್ಡವರ ನಡುವೆ ಬಳಕೆಯಾಗುತ್ತ ಅಭ್ಯಾಸವಾಯಿತು. ತನ್ನ ಸಂಗೀತವನ್ನು ರಾಜನಿಂದ ಹಿಡಿದು ಎಲ್ಲರೂ ದಿನಾ ಮೆಚ್ಚಿಕೊಳ್ಳುವುದನ್ನು ನೋಡುತ್ತಿದ್ದಂತೆ ಅವನಿಗೆ ಸಂತೋಷವೂ ಆಯಿತು.

ಹೀಗಿರುವಾಗ ಒಂದು ಸಾರಿ ರತ್ನಪುರದಿಂದ ಕುಂಜರನೆಂಬ ಸಂಗೀತ ವಿದ್ವಾಂಸನೊಬ್ಬ ತನ್ನ ಶಿಷ್ಯರೊಂದಿಗೆ ಚಿತ್ರಕೂಟದ ರಾಜನ ಬಳಿಗೆ ಬಂದನು. ಆ ಸಂಗೀತ ವಿದ್ವಾಂಸನ ಕೋರಿಕೆಯಂತೆ ರಾಜನು ವಿಶ್ವನಾಥನಿಗೂ ಕುಂಜರನಿಗೂ ಸಂಗೀತ ಸ್ಪರ್ಧೆಯನ್ನು ಏರ್ಪಡಿಸಿದನು.

ಅದರಂತೆ ಕುಂಜರ, ವಿಶ್ವನಾಥರ ಸಂಗೀತ ಸ್ಪರ್ಧೆ ಚೆನ್ನಾಗಿಯೇ ನಡೆಯಿತು. ಕಡೆಗೆ ಈ ಸ್ಪರ್ಧೆಯಲ್ಲಿ ವಿಶ್ವನಾಥನು ಸೋತುಹೋದನು. ಕಾರಣವೇನೆಂದರೆ ವಿಶ್ವನಾಥನು ವೀಣೆ ಬಾರಿಸುವುದರಲ್ಲಿ ಎಷ್ಟೇ ಪ್ರಾವೀಣ್ಯತೆ ಪಡೆದಿದ್ದರೂ ಸಂಗೀತ ಜ್ಞಾನವನ್ನು ಸರಿಯಾದ ಗುರುವಿನಿಂದ ಶಾಸ್ತ್ರೀಯವಾಗಿ ಕಲಿತವನಲ್ಲ. ಕುಂಜರನಾದರೋ ಅಸಮಾನ ಸಂಗೀತ ಪಾಂಡಿತ್ಯಗಳಿಸಿದವನು.





ಈ ಸಂಗತಿ ರಾಜನಿಗೂ ಸಭಿಕರಿಗೂ ಮಾತ್ರ ವಲ್ಲದೆ, ವಿಶ್ವನಾಥನಿಗೆ ಕೂಡಾ ಸ್ಪಷ್ಟವಾಗಿ ಗೊತ್ತಾಗಿತ್ತು ಈ ಸ್ಪರ್ಧೆಯಲ್ಲಿ.

ಈ ಪರಾಜಯದ ಫಲಿತಾಂಶ ಹೊರಟ ಮರು ಕ್ಷಣದಿಂದ ವಿಶ್ವನಾಥನ ಮೇಲೆ ರಾಜನಿಗೂ, ಇತರ ಆಸ್ಥಾನದ ಸಭಾಸದರಿಗೂ ಒಮ್ಮೆಗೇ ಆದರವು ತಗ್ಗಿ ಹೋಯಿತು. ಅವರ ದೃಷ್ಟಿಯಲ್ಲಿ ವಿಶ್ವನಾಥನು ಮಾಡಿದ ದೊಡ್ಡ ತಪ್ಪು ಏನೆಂದರೆ ರಾಜ್ಯದ ಗೌರವ ವನ್ನು ತಗ್ಗಿಸಿಬಿಟ್ಟನೆಂಬುದೇ.

ಇದನ್ನು ತಿಳಿದು ವಿಶ್ವನಾಥನು ಮಾನಸಿಕವಾಗಿ ತುಂಬಾ ನೊಂದುಕೊಂಡನು. ಅವನ ಚಿಂತೆಯನ್ನು ನೋಡಿ ಪತ್ನಿ ಮೀನಾಕ್ಷಿ "ನೀವೇಕೆ ಚಿಂತಿಸುವಿರಿ? ಸ್ಪರ್ಧೆಯ ವಿಷಯದಲ್ಲಿ ಜಯಾಪಜಯಗಳು ದೈವಾ ಧೀನವೆಂಬುದು ನಿಮಗೆ ತಿಳಿಯದೆ?" ಎಂದಳು.

"ನನ್ನನ್ನು ನೋಯಿಸುವುದು ನನ್ನ ಅಪಜಯ ವಲ್ಲ. ಏಕೆಂದರೆ ನಾನು ಒಬ್ಬ ಸಮರ್ಥನ ಕೈಯಲ್ಲೇ ಸೋತಿದ್ದೇನೆ. ರಾಜನೇ ಮೊದಲಾದವರ ಪ್ರವರ್ತನೆ ಗಾಗಿ ನಾನು ಚಿಂತಿಸುತ್ತಿದ್ದೇನೆಯೇ ಹೊರತು ಸೋತೆ ನೆಂಬುದಕ್ಕಲ್ಲ." ಎಂದ ವಿಶ್ವನಾಥ.

ಕಡೆಗೆ ವಿಶ್ವನಾಥನು ಒಂದು ನಿಶ್ಚಯಕ್ಕೆ ಬಂದು ರಾಜನ ಆಸ್ಥಾನಕ್ಕೆ ಹೋಗುವುದನ್ನು ನಿಲ್ಲಿಸಿದನು. ಮನೆಯೊಳಗೇ ಇದ್ದು ಸಂಗೀತ ರಾಗಗಳಲ್ಲಿ ಲಯಸಿ ದ್ಧಿತ್ವಸಾಧನೆಯನ್ನು ಪ್ರಾರಂಭಿಸಿದನು. ಆರು ತಿಂಗಳವರೆಗೆ ಅವನು ಅಂತಹ ಸಾಧನೆ ಮಾಡಿ ಕೊಂಡಿದ್ದರೂ ಅವನು ಆಸ್ಥಾನಕ್ಕೆ ಬಾರದಿರುವು ದನ್ನು ಕುರಿತು ವಿಚಾರಿಸಿದವರಿಲ್ಲ.

ಆರು ತಿಂಗಳು ಸಾಧನೆ ಮಾಡಿ ಆತ್ಮವಿಶ್ವಾಸ ಗಳಿಸಿಕೊಂಡ ಮೇಲೆ ವಿಶ್ವನಾಥನು ರತ್ನಪುರಿಗೆ ಹೋಗಿ ಅಲ್ಲಿಯ ವಿದ್ವಾಂಸ ಕುಂಜರನನ್ನು ಸ್ಪರ್ಧೆಗೆ ಆಹ್ವಾನಿಸಿದನು.

ಆ ಸ್ಪರ್ಧೆಯಲ್ಲಿ ಕುಂಜರನು ಸೋತು ವಿಶ್ವ ನಾಥನು ಅಲ್ಲಿಯ ರಾಜನಿಂದ ಭಾರಿ ಸನ್ಮಾನವನ್ನೂ ಪಡೆದನು. ಕುಂಜರನು ಕೂಡ ಆತ್ಮಾನಂದದಿಂದ ವಿಶ್ವನಾಥನನ್ನು ಆಲಿಂಗಿಸಿಕೊಂಡು ತನ್ನ ಸೋಲನ್ನು ಒಪ್ಪಿಕೊಂಡು ವಿಶ್ವನಾಥನ ಸಾಧನೆಯನ್ನು ತುಂಬಾ ಶ್ಲಾಘಿಸಿದನು. ತನ್ನ ವಿಜಯಕ್ಕೆ ಕುಂಜರನೇ ಕಾರಣ ನೆಂದು ಹೇಳಿ ವಿಶ್ವನಾಥನೂ ಆತನಿಗೆ ಅಭಿನಂದನೆ ತೋರಿಸಿದನು.

ಹೀಗೆ ವಿಶ್ವನಾಥನು ಕುಂಜರನನ್ನು ಸೋಲಿಸಿ ಬಂದಿದ್ದಾನೆಂದು ತಿಳಿದ ಕೂಡಲೇ ರಾಜನೂ ಇತರ ಆಸ್ಥಾನದವರೂ ವಿಶ್ವನಾಥನನ್ನು ನೋಡಲು ಬಂದರು. ಅವನನ್ನು ಶ್ಲಾಘಿಸುತ್ತ ಅವನ ಪ್ರತಿಭಾ ವಿಶೇಷಗಳನ್ನು ಸರಿಯಾಗಿ ನೋಡದಿದ್ದುದಕ್ಕೆ ಕ್ಷಮಾ ಪಣೆ ಕೂಡ ಕೇಳಿಕೊಂಡರು. ಇನ್ನು ಎಂದಿನಂತೆ ಆಸ್ಥಾನಕ್ಕೆ ಬರಬೇಕಾಗಿಯೂ ಕೇಳಿಕೊಂಡರು.

ವಿಶ್ವನಾಥನು ಅವರೊಂದಿಗೆ ಆಸ್ಥಾನದ ಪದವಿಯ ಅಗತ್ಯ ತನಗೇನೂ ಇಲ್ಲವೆಂದು ಹೇಳಿ,

ತನ್ನ ಗ್ರಾಮಕ್ಕೇ ಹೊರಟುಹೋಗುವ ತನ್ನ ನಿಶ್ಚಯವನ್ನೂ ತಿಳಿಸಿದನು. ಆದರಂತೆ ಗ್ರಾಮದ ತನ್ನ ಮನೆಗೇ ಹಿಂದಿರುಗಿ ಬಂದು, ಹಿಂದಿನಂತೆಯೇ ಹಗಲೆಲ್ಲ ವ್ಯವಸಾಯ ಮಾಡುತ್ತ, ಸಾಯಂಕಾಲದಲ್ಲಿ ವೀಣೆ ಬಾರಿಸಿಕೊಂಡು, ಕೇಳಲು ಬಂದವರನ್ನು ಆನಂದ ಪಡಿಸುತ್ತ ಸುಖವಾಗಿಯೂ ನೆಮ್ಮದಿಯಾಗಿಯೂ ಇದ್ದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ—"ಈ ವಿಶ್ವನಾಥನನ್ನು ಎಂತಹ ಮನುಷ್ಯನೆಂದು ಹೇಳಬೇಕು? ಅವನು ಸ್ಪರ್ಧೆಯಲ್ಲಿ ಸೋತುಹೋದಾಗ ಸಂತೋಷವಾಗಿಯೇ ಸೋಲನ್ನು ಒಪ್ಪಿಕೊಂಡಿದ್ದಾನೆ. ಸೋತದ್ದಕ್ಕಾಗಿ ದುಃಖಿಸದವನು ಆರು ತಿಂಗಳು ದೈತ್ಯ ಸಾಧನೆ ಮಾಡಿ, ಹಗೆ ಹಿಡಿದವನಂತೆ ಹೋಗಿ ಕುಂಜರನನ್ನು ಸೋಲಿಸಿ ಬಂದನಲ್ಲ? ಅದೇಕೆ? ಹಾಗೆ ಬಂದು ರಾಜನ ಸದ್ಭಾವನೆಯನ್ನು ಮತ್ತೆ ಗಳಿಸಿಕೊಂಡವನು ಆಸ್ಥಾನದ ವಿದ್ವಾಂಸ ಪದವಿಗೆ ಒಪ್ಪಿಕೊಳ್ಳದೆ ನಿರಾಕರಿಸಿ ಮನೆಗೆ ಹಿಂದಿರುಗಿ ಮೊದಲಿನಂತೆ ವ್ಯವಸಾಯವನ್ನೇ ಮಾಡಿಕೊಂಡಿದ್ದನೇಕೆ? ಈ ಪ್ರಶ್ನೆಗಳಿಗೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆಯೊಡೆದು ಚೆದರುತ್ತದೆಂಬುದನ್ನು ಮರೆಯಬೇಡ!" ಎಂದು ಹೇಳಿ ಸುಮ್ಮನಾಯಿತು. ಅದಕ್ಕೆ ತ್ರಿವಿಕ್ರಮನು "ವಿಶ್ವನಾಥನು ಸಂಗೀತ ಪ್ರವೀಣನು ಮಾತ್ರವಲ್ಲ, ಸಂಗೀತ ಪ್ರಿಯನೂ ಹೌದು. ಅವನು ತನ್ನ ಆನಂದಕ್ಕಾಗಿ ವೀಣೆಬಾರಿಸಿಕೊಳ್ಳುತ್ತ, ಜೀವನಕ್ಕಾಗಿ ವ್ಯವಸಾಯ ಮಾಡಿಕೊಂಡಿದ್ದನು. ಆದರೆ ಅವನ ಮೇಲೆ ರಾಜನ ದೃಷ್ಟಿ ಬಿದ್ದುದರಿಂದ ಸಂಗೀತವು ಅವನ ಜೀವನಕ್ಕೆ ದಾರಿಯಾಯಿತು. ತನಗಿಂತ ಸಮರ್ಥನಾದವನೊಬ್ಬ ತನ್ನನ್ನು ಸೋಲಿಸಿದುದರಿಂದ ಅವನಿಗೇನೂ ಅವಮಾನವೆನಿಸಲಿಲ್ಲ. ಆದರೆ ಅದು ಮಹಾರಾಜನಿಗೆ ಅವಮಾನವೆನಿಸಿತೆಂದು ಗೊತ್ತಾದುದರಿಂದಲೇ ಬಾಧೆಗೊಳಗಾದನು. ದೈತ್ಯ ಸಾಧನೆಯಿಂದ ಯಾರನ್ನು ಬೇಕಾದರೂ ಸೋಲಿಸಬಹುದೆಂದೂ, ಸಂಗೀತ ಪ್ರಿಯತೆಗೂ, ಜಯಾಪಜಯಗಳಿಗೂ ಸಂಬಂಧವೇನಿಲ್ಲವೆಂದೂ ನಿರೂಪಿಸಲಿಕ್ಕಾಗಿ ಅವನು ಕುಂಜರನನ್ನು ಸೋಲಿಸಿದನು. ಆದರೆ ಸಂಗೀತವನ್ನು ಜೀವನಕ್ಕೆ ಆಧಾರವಾಗಿ ಹಿಡಿದುಕೊಳ್ಳುವುದರಿಂದ ಸುಖವೂ ಮನಃಶಾಂತಿಯೂ ಇಲ್ಲವೆಂದು ಗೊತ್ತಾದುದರಿಂದ, ವಿಶ್ವನಾಥನು ರಾಜಾಸ್ಥಾನವನ್ನು ನಿರಾಕರಿಸಿ ಮನೆಗೆ ಹಿಂದಿರುಗಿ ಮತ್ತೆ ವ್ಯವಸಾಯವನ್ನೇ ಹಿಡಿದುಕೊಂಡನು." ಎಂದನು.

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಯಲ್ಲಿ ನೇತಾಡತೊಡಗಿತ್ತು.





# ರಾಣಿಯ ಮಾತು

ಒಂದು ಕಾಲದಲ್ಲಿ ಕಾಂಭೋಜರಾಜ್ಯವನ್ನು ಕುಮಾರವರ್ಮನೆಂಬ ರಾಜನು ಪಾಲಿಸಿಕೊಂಡಿದ್ದನು. ವಿದ್ಯಾವಂತನೂ, ಶೂರನೂ, ರಾಜನೀತಿಗಳನ್ನು ಬಲ್ಲವನೂ ಆದ ಆ ರಾಜನಿಗೆ ಪ್ರಜಾರಂಜಕವಾಗಿ ರಾಜ್ಯಪಾಲನೆ ಮಾಡುವುದರಲ್ಲಿ ತನಗೆ ಸರಿಯಾರಿಲ್ಲವೆಂದು ಗರ್ವವಿತ್ತು.

ಒಂದುಸಾರಿ ಯಾವುದೋ ಮಾತಿಗೆ ಮಾತು ಬಂದು ಅವನು ತನ್ನ ರಾಣಿಯೊಂದಿಗೆ ತನ್ನ ಶ್ರೇಷ್ಠತೆಯನ್ನು ಹೇಳಿಕೊಂಡಾಗ ರಾಣಿ ನಗುತ್ತ, "ವಾರಸತ್ವ ರೀತಿಯಲ್ಲಿ ರಾಜನಾಗುವುದರಲ್ಲಿ ವಿಶೇಷವೇನಿದೆ? ಎಷ್ಟಾದರೂ ಸ್ವಂತ ಶಕ್ತಿಯಿಂದ ರಾಜ್ಯವನ್ನು ಸಂಪಾದಿಸಿಕೊಳ್ಳುವುದೇ ದೊಡ್ಡ ವಿಷಯ" ಎಂದಳು. ರಾಣಿ ಈ ಮಾತನ್ನು ಏನೋ ಹಾಸ್ಯ ಧೋರಣೆಯಲ್ಲಿ ಹೇಳಿದರೂ ಕುಮಾರವರ್ಮನ ಮನಸ್ಸಿನೊಳಗೆ ಚೆನ್ನಾಗಿ ನಾಟಬಿಟ್ಟಿತು. ಆದಕ್ಕಾಗಿ ಅನೇಕ ಬಗೆಯ ದೊಡ್ಡ ದೊಡ್ಡ ವೀರಸ್ಪರ್ಧೆಗಳನ್ನು ಏರ್ಪಾಡು ಮಾಡಿದನು ಆ ರಾಜ.

ಆ ಸ್ಪರ್ಧೆಯಲ್ಲಿ ಭಾಗವಹಿಸಲು ದೇಶದ ಎಲ್ಲಾ ಕಡೆಗಳಿಂದಲೂ ಬೇರೆ ಬೇರೆ ವಿದ್ಯೆಗಳಲ್ಲಿ ಪ್ರವೀಣರಾದ ಉತ್ಸಾಹಶಾಲಿಗಳಾದ ಯುವಕರೂ, ಬಲಶಾಲಿಗಳೂ, ವೀರವಿಹಾರಿಗಳೂ ಬಂದು ಸೇರಿದರು. ಆಯಾ ವಿಭಾಗಗಳಲ್ಲಿ ಪ್ರವೀಣರೆನಿಸಿದರು ನಿರ್ಣಾಯಕರಾಗಿ ನಿಯಮಿಸಲ್ಪಟ್ಟರು. ಅದರಂತೆ ಅನೇಕ ಸರ್ಧೆಗಳು ನಡೆದುವು. ಜಯಶಾಲಿಗಳಾದವರಿಗೆ ಬಹುಮಾನಕೊಡ ಬೇಕಾದುದೊಂದೇ ಇನ್ನುಳಿದುದು.

ಕತ್ತಿಯ ಯುದ್ಧದಲ್ಲಿ ಎಲ್ಲ ವೀರರನ್ನೂ ಮೀರಿಸಿದವನೆಂದು ರಾಮರಾಜನೆಂಬವನು ಜಯಶಾಲಿಯಾಗಿದ್ದನು. ಕುಮಾರವರ್ಮ ರಾಜನು ಅವನನ್ನು ಸಭೆಗೆ ತೋರಿಸಿ, "ನಮ್ಮ ದೇಶದಲ್ಲಿ ಈ ರಾಮರಾಜನಿಗಿಂತ ಹೆಚ್ಚಿನ ಖಡ್ಗವೀರನಿಲ್ಲವೆಂದು ಗೊತ್ತಾಯಿತಷ್ಟೆ?" ಎಂದು ಕೇಳಿದನು. ಸಭೆಯವರೆಲ್ಲಾ ಹೌದು ಹೌದೆಂದರು.

"ಅದನ್ನೀಗ ನಾನು ನಿರ್ಣಯಿಸುತ್ತೇನೆ" ಎಂದು ಹೇಳಿ ರಾಜನು ಖಡ್ಗವನ್ನು ತೆಗೆದುಕೊಂಡು ರಾಮರಾಜನೊಂದಿಗೆ ಯುದ್ಧಕ್ಕೆ ಬಂದನು. ಎಲ್ಲರೂ ಅತ್ಯಾಶ್ಚರ್ಯದಿಂದ ನೋಡುತ್ತಿರಲು, ರಾಮರಾಜ ಕುಮಾರವರ್ಮರು ಬಹಳ ಹೊತ್ತಿನವರೆಗೆ ತೀವ್ರ ಹೋರಾಟ ಮಾಡಿದರು. ಕಡೆಗೆ ರಾಮರಾಜನು

ಕುಮಾರವರ್ಮನ ಕತ್ತಿಯನ್ನು ಹಾರಿಸಿಬಿಟ್ಟನು. ಅಷ್ಟರಲ್ಲಿ ನಿರ್ಣಾಯಕರು ಮುಂದಕ್ಕೆ ಹೋಗಿ ರಾಮರಾಜನು ನಿಯಮವನ್ನು ಉಲ್ಲಂಘಿಸಿದನೆಂದು ಹೇಳಿಬಿಟ್ಟರು. ಮತ್ತೆ ಅವರು ರಾಮರಾಜನನ್ನು ಕರೆದು ಗುಟ್ಟಾಗಿ ಏನೋ ಹೇಳಿದರು. ಆಗ ರಾಮ ರಾಜನು ಕುಮಾರವರ್ಮನ ಮುಂದೆ ಬಂದು ಕೈ ಜೋಡಿಸಿ, "ಪ್ರಭುಗಳೇ, ನಿಮ್ಮ ಅತಿರಭಸದ ಚಾಕ ಚಕ್ಯತೆಯನ್ನು ತಾಳಲಾಗದೆ ಕೆಲವು ಯುದ್ಧದ ನಿಯಮಗಳಲ್ಲಿ ತಪ್ಪಿದ್ದೇನೆ. ತಮ್ಮೊಂದಿಗೆ ಇನ್ನೊಂದು ಸಾರಿ ಯುದ್ಧ ಮಾಡುವ ಅವಕಾಶ ಕೊಡಬೇಕು" ಎಂದು ಕೇಳಿಕೊಂಡನು.

ಸೋತೆನೆಂಬ ರೋಷದಲ್ಲಿದ್ದ ಕುಮಾರವರ್ಮನು ಕೂಡಲೇ ಆದಕ್ಕೆ ಒಪ್ಪಿದನು. ಈಸಾರಿ ಕುಮಾರ ವರ್ಮನು ರಾಮರಾಜನ ಕೈಯಲ್ಲಿದ್ದ ಕತ್ತಿಯನ್ನು ಬಲುಬೇಗದಲ್ಲಿ ಹಾರಿಬೀಳುವಂತೆ ಮಾಡಿದನು. ಕತ್ತಿ ಯುದ್ಧದ ಬಹುಮಾನವು ರಾಜನಿಗೇ ದಕ್ಕಿತು.

ಇದೇ ವಿಧವಾಗಿ ಸಾಹಿತ್ಯ ಗೋಷ್ಠಿಯಲ್ಲಿ ಎಲ್ಲಾ ಸ್ಪರ್ಧೆಗಳಲ್ಲಿಯೂ ಗೆದ್ದ ವಿದ್ಯಾನಾಥನೊಂದಿಗೆ ಕುಮಾರವರ್ಮ ರಾಜನು ಸ್ಪರ್ಧಿಸಿದನು. ಇಬ್ಬರಿಗೂ ಚರ್ಚೆಗಳು ನಡೆಯುತ್ತಿರುವಾಗ, ಮಧ್ಯದಲ್ಲಿ ನಿರ್ಣಾಯಕರು ತಲೆ ಹಾಕಿ ವಿದ್ಯಾನಾಥನಲ್ಲಿ ವ್ಯಾಕರಣ ದೋಷಗಳು ಬಂದುವೆಂದು ಹೇಳಿ, ಬಹುಮಾನ ವನ್ನು ರಾಜನಿಗೇ ನಿರ್ಣಯಿಸಿದರು.

ಈ ರೀತಿಯಾಗಿ ಎಲ್ಲಾ ಬಗೆಯ ಸ್ಪರ್ಧೆಗಳಲ್ಲಿಯೂ ರಾಜನೇ ಬಹುಮಾನವನ್ನು ಗಿಟ್ಟಿಸಿಕೊಂಡನು. ಇಂತಹ ಸ್ಪರ್ಧೆ ಆ ಒಂದು ಸಾರಿಮಾತ್ರವೇ ಮುಗಿದು ಬಿಡಲಿಲ್ಲ. ಪ್ರತಿವರ್ಷವೂ ನಡೆಯಿತು. ತಾನು ಏರ್ಪಡಿಸಿದ ಎಲ್ಲಾ ಸ್ಪರ್ಧೆಗಳಲ್ಲಿಯೂ ತಾನೇ ಬಹು ಮಾನಗಳನ್ನೂ ದಕ್ಕಿಸಿಕೊಂಡನು ಆ ರಾಜ. ಅವನು ಈ ತನ್ನ ವಿಜಯ ಪರಂಪರೆಗಳನ್ನು ಹೆಂಡತಿ ಯೊಂದಿಗೆ ಹೇಳಿಕೊಂಡಾಗಲೆಲ್ಲಾ ಅವಳು ನಕ್ಕು



ಸುಮ್ಮನಾಗುತ್ತಿದ್ದಳು. ಹೀಗೆ ವಿಜಯದ ಮಯಕ ದಲ್ಲಿದ್ದ ಕುಮಾರವರ್ಮನ ಕಿವಿಗೆ ಒಂದು ದಾರುಣ ವಾದ ಸುದ್ದಿಹತ್ತಿತು. ವಿಶ್ವಾಸದ ಮಂತ್ರಿಯಾದ ಭೈರವನು, ರಾಜ್ಯವನ್ನು ವಶಪಡಿಸಿಕೊಳ್ಳಲಿಕ್ಕಾಗಿ ಬಹಳಕಾಲದಿಂದ ಒಳ ತಂತ್ರ ನಡೆಸಿ ಈಗ ಒಮ್ಮೆಗೇ ಬೆಳಕಿಗೆ ಬರಲಿದ್ದಾನೆ. ಅವನ ಪಥಕವು ಪೂರ್ತಿಯಾಗಿ ಹೋಗಿದೆ. ಅವನಿನ್ನು ಯಾವ ಕ್ಷಣದಲ್ಲಿಯೂ ಸಿಂಹಾಸನವೇರಿ ಬಿಡುತ್ತಾನೆ.

ಇಂತಹ ಭಯಂಕರ ವಾರ್ತೆ ಕೇಳಿದ ಕೂಡಲೇ ಕುಮಾರವರ್ಮನು ತನ್ನ ಹೆಂಡತಿಯೊಂದಿಗೆ ರಹಸ್ಯ ಮಾರ್ಗದಿಂದ ತಪ್ಪಿಸಿಕೊಂಡು ನಗರವನ್ನು ಬಿಟ್ಟು ಓಡಿಹೋದನು. ಆಗಿನಿಂದ ಅವನು ಸಾಧಾರಣ ಮನುಷ್ಯನೇ ಆದನು. ಭೈರವಮಂತ್ರಿ ನಿರ್ವಿಘ್ನ ವಾಗಿ ತಾನೇ ರಾಜ್ಯಾಭಿಷೇಕ ಮಾಡಿಸಿಕೊಂಡನು.

ಕುಮಾರವರ್ಮನೂ ರಾಣಿ ಕರ್ಪೂರವಲ್ಲಿಯೂ ಯಾವುದೋ ಒಂದು ಹಳ್ಳಿ ಮೂಲೆಯಲ್ಲಿ, ಹೆಸರು



ಗಳನ್ನು ಬದಲಾಯಿಸಿಕೊಂಡು, ಬಡತನದ ಉಡುಗೆಗಳಲ್ಲಿ ತಲೆ ಮರೆಸಿಕೊಂಡಿದ್ದರು. ಅವರಿಬ್ಬರೂ ಪ್ರಜೆಗಳೊಂದಿಗೆ ಪ್ರಜೆಗಳಾಗಿ ಅವರ ಹಾಗೆ ಕಾಯ ಕಷ್ಟ ಮಾಡುತ್ತ ಬದುಕು ನಡೆಸತೊಡಗಿದರು.

ಹೀಗೆ ಸಾಧಾರಣ ಪ್ರಜೆಗಳ ನಡುವೆ ಜೀವನ ಪ್ರಾರಂಭಿಸಿದ ಮೇಲೆ ಕುಮಾರವರ್ಮನಿಗೆ ಪ್ರಜೆಗಳ ಅಗತ್ಯಗಳೂ, ಕಷ್ಟಸುಖಗಳೂ ಏನೆಂಬುದು ಸ್ಪಷ್ಟವಾಗಿ ತಿಳಿಯತೊಡಗಿತು.

ಏಕೆಂದರೆ ಅವೆಲ್ಲವೂ ಈಗ ಅವನಿಗೂ ಅನ್ವಯಿಸುತ್ತಿದ್ದುವು. ತನ್ನ ಪರಿಪಾಲನೆಯಲ್ಲಿ ತಾನು ಅಂದುಕೊಂಡಿದ್ದ ಹಾಗೆ ಪ್ರಜಾರಂಜಕವಾಗಿರಲಿಲ್ಲವೆಂಬುದೂ ಈಗ ಗೊತ್ತಾಯಿತು.

ಆ ವರ್ಷದಲ್ಲಿ ಕೂಡಾ ರಾಜಧಾನಿಯಲ್ಲಿ ತಾನು ನಡೆಸಿಕೊಂಡು ಬಂದಂತೆ ಸ್ಪರ್ಧೆಗಳು ನಡೆಯುತ್ತವೆಂದು ತಿಳಿದು ಕುಮಾರವರ್ಮನಿಗೆ ಬಹಳ ಉತ್ಸಾಹ ಬಂದಿತು. ಈಗ ರಾಜನಾದ ಭೈರವನು ತನ್ನನ್ನೇ ಅನುಕರಿಸುವುದು ಅವನಿಗೊಂದು ಬಗೆಯ ಸಮಾಧಾನವನ್ನಿತ್ತಿತು. ಅವನು ಬಹಳ ಉತ್ಸಾಹದಿಂದ ಆ ವಿಷಯವನ್ನು ಕುರಿತು ಜನರೊಂದಿಗೆ ಮಾತಾಡಿದನು. ಆ ಸ್ಪರ್ಧೆಯನ್ನು ಕುರಿತು ಯುವಕರಲ್ಲಿ ಉತ್ಸಾಹವೇನಿಲ್ಲದಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅದಕ್ಕೇನು ಕಾರಣವೆಂದು ಕೇಳಿದಾಗ, "ಯಾರಿಗೆ ಬೇಕು ಆ ಸ್ಪರ್ಧೆ? ಬಹುಮಾನ ಕಡೆಗೆ ಸಿಗುವುದು ರಾಜನಿಗೆ ತಾನೇ?" ಎಂದರು ಬೇಸರದಿಂದ.

ತಾನು ರಾಜನಾಗಿದ್ದಾಗಿನ ತನ್ನ ಪ್ರತಿಭೆಯನ್ನು ಪ್ರಜೆಗಳು ಮರೆತಿಲ್ಲವೆಂದು ತಿಳಿದು ಕುಮಾರವರ್ಮನಿಗೆ ಸಂತೋಷವೇ ಆಯಿತು. ಆದರೆ ಈಗ ರಾಜನಾಗಿರುವವನು ಮಂತ್ರಿ ಭೈರವ. ಅವನು ಮಂತ್ರಾಲೋಚನೆಯಲ್ಲಿ ಹೊರತು ಬೇರೆ ಯಾವುದರಲ್ಲಿಯೂ ಸಾಮರ್ಥ್ಯವಿಲ್ಲದವನೆಂದು ಕುಮಾರವರ್ಮನಿಗೆ ಗೊತ್ತು. ಆದುದರಿಂದ ಈ ಸ್ಪರ್ಧೆಗಳಲ್ಲಿ ತಾನೂ ಸೇರಿ ಗೆದ್ದು ಬಹುಮಾನಗಳನ್ನು ಗಿಟ್ಟಿಸಿಕೊಳ್ಳಬೇಕೆಂದು ಕುಮಾರವರ್ಮನು ಹೊರಟನು.

ಬೇರೆ ಬೇರೆ ವಿದ್ಯೆಗಳಲ್ಲಿ ಸ್ಪರ್ಧಿಸಲು ಬಂದವರ ಶಕ್ತಿಸಾಮರ್ಥ್ಯಗಳನ್ನು ನೋಡುತ್ತಿದ್ದಂತೆ ಕುಮಾರವರ್ಮನಿಗೆ ಆಶ್ಚರ್ಯವೆನಿಸಿತು. ಅವರೊಂದಿಗೆಲ್ಲ ಸ್ಪರ್ಧಿಸಿದಾಗ, ದೇಶದಲ್ಲಿ ವಿದ್ಯೆಗಳ ಪ್ರತಿಭೆ ತೀರಮಂಕಾಗಿರುವಂತೆ ಅವನಿಗೆ ತೋರಿತು. ಎಲ್ಲಾ ವಿದ್ಯೆಗಳಲ್ಲಿಯೂ ಅವನೇ ಗೆದ್ದವನು.

ಹೀಗೆ ಎಲ್ಲಾ ರಂಗಗಳಲ್ಲಿಯೂ ಗೆದ್ದವರನ್ನು ಕಡೆಗೆ ರಾಜನಾದ ಭೈರವನೇ ಸ್ಪರ್ಧೆಗೆ ಕರೆದನು. ಅಂತೆಯೇ ಕುಮಾರವರ್ಮನಿಗೂ ಅವನಿಗೂ ಕತ್ತಿಯುದ್ಧವು ತೊಡಗಿತು. ಕುಮಾರವರ್ಮನು ಕೆಲವೇ ಕ್ಷಣಗಳಲ್ಲಿ ಭೈರವನನ್ನು ನಿರಾಯುಧನನ್ನಾಗಿ ಮಾಡಿದನು. ಕೂಡಲೇ ನಿರ್ಣಾಯಕರು ತಲೆ ಹಾಕಿ, ಕುಮಾರವರ್ಮನು ನಿಯಮೋಲ್ಲಂಘನೆ ಮಾಡಿದ್ದಾ

ನೆಂದೂ, ಇಲ್ಲದಿದ್ದರೆ ವಿಜಯವು ಭೈರವನದಾಗುತ್ತಿತ್ತೆಂದೂ ಹೇಳಿಬಿಟ್ಟರು. ಹಾಗೆ ಹೇಳಿ ಅವರು ಕುಮಾರವರ್ಮನನ್ನು ಆಚೆಗೆ ಕರೆದೊಯ್ದು, "ಹುಚ್ಚಾ, ನೀನು ಸ್ಪರ್ಧೆಗೆ ನಿಂತಿರುವುದು ಒಬ್ಬ ವ್ಯಕ್ತಿಯ ಹತ್ತಿರವಲ್ಲ. ಒಂದು ದೊಡ್ಡ ಪದವಿಯೊಂದಿಗೆ. ನೀನು ಸೋತು ಹೋಗಬೇಕಾದುದು ಭೈರವನೆಂಬ ಮನುಷ್ಯನೊಂದಿಗಲ್ಲ, ಸಿಂಹಾಸನಕ್ಕೆ. ಆದುದರಿಂದ ರಾಜನ ಹತ್ತಿರ ಕ್ಷಮೆ ಕೇಳಿ, ಇನ್ನೊಮ್ಮೆ ಹೋರಾಟಕ್ಕೆ ಅವಕಾಶವನ್ನು ಬೇಡಿ ಸೋತುಬಿಡು. ಇಲ್ಲದಿದ್ದರೆ ನೀನು ಪ್ರಾಣಕ್ಕೇ ಎರವಾಗ ಬೇಕಾದೀತು." ಎಂದರು.

ಬೇರೆ ಉಪಾಯವಿಲ್ಲದೆ ಕುಮಾರವರ್ಮನು ಅವರು ಹೇಳಿದಂತೆಯೇ ಮಾಡಿ, ಪಾರಾದನು. ತಾನು ರಾಜನಾಗಿದ್ದಾಗ ಗೆದ್ದುದರ ರಹಸ್ಯ ಈಗ ಕುಮಾರವರ್ಮನಿಗೆ ಅರ್ಥವಾಯಿತು.

ಕಡೆಗೆ ಅವನು ತನ್ನ ಹಳ್ಳಿ ಮೂಲೆಗೆ ಹಿಂದಿರುಗಿ ಬಂದ ಮೇಲೆ ಕೆಲವರು ಅವನೊಂದಿಗೆ "ರಾಜಧಾನಿಗೆ ಹೋದೆಯಲ್ಲ? ಎಲ್ಲಾ ಸ್ಪರ್ಧೆಗಳಲ್ಲಿಯೂ ಭೈರವ ರಾಜನೇ ಗೆದ್ದನೇ? ಈ ಭಾಗ್ಯಕ್ಕಾಗಿ ಅಷ್ಟು ದೂರ ರಾಜಧಾನಿಗೆ ಹೋಗಬೇಕೇನು? ನಿನಗೆ ವಿಜಯದ ಬಹುಮಾನವೇ ಬೇಕಾಗಿದ್ದರೆ, ಸೋಲೇ ಇಲ್ಲದ ಗೆಲುವೆ ಬೇಕಾದರೆ ನೀನೂ ಒಬ್ಬ ರಾಜನಾಗ ಬೇಕು." ಎಂದರು. ಈ ಮಾತು ಅವನ ಮನಸ್ಸಿಗೆ ನಾಟಿತು.

ಭೈರವನ ಪರಿಪಾಲನೆಯಲ್ಲಿ ಪ್ರಜೆಗಳ ಕಷ್ಟ ದಿನದಿಂದ ದಿನಕ್ಕೆ ಹೆಚ್ಚಾಗ ತೊಡಗಿತು. ಅವನ ರಾಜ್ಯಭಾರವು ನಿಜಕ್ಕೂ ತುಂಬ ಕೆಟ್ಟುದಾಗಿತ್ತು. ಕುಮಾರವರ್ಮನು ದೇಶಸಂಚಾರ ಮಾಡುತ್ತ, ಉತ್ಸಾಹವೂ ಧೈರ್ಯವೂ ಇರುವ ಯುವಕರನ್ನೂ, ವೀರಬಂಟರನ್ನೂ ತನ್ನೊಂದಿಗೆ ಸೇರಿಸಿಕೊಳ್ಳುತ್ತ ರಹಸ್ಯವಾಗಿ ಒಂದು ಸೈನ್ಯವನ್ನೇ ತಯಾರಿಸಿಕೊಂಡನು. ಆ ಸೈನ್ಯಕ್ಕೆ ನಾಯಕನನ್ನು ಆರಿಸಿಕೊಳ್ಳುವುದರಲ್ಲಿ ಯುವಕರ ನಡುವೆ ಸ್ಪರ್ಧೆಗಳು ನಡೆದುವು. ಅತ್ಯಂತ ಉತ್ಸಾಹದಿಂದ ನಡೆದ ಎಲ್ಲಾ ವೀರ ಸ್ಪರ್ಧೆಗಳಲ್ಲಿಯೂ ಕುಮಾರವರ್ಮನೇ ಗೆದ್ದು, ಅವನೇ ಸೇನಾನಾಯಕನೂ



ಆಗಿ ಆರಿಸಲ್ಪಟ್ಟನು. ರಾಜನಲ್ಲದ ಸ್ಥಿತಿಯಲ್ಲಿ ದೊರೆತ ನಿಜವಾದ ಗೆಲುವೆಯಾಗಿತ್ತು ಇದು. ಆಮೇಲೆ ಅವನು ಕೈಬಿಟ್ಟು ಹೋದ ರಾಜ್ಯವನ್ನು ತಿರುಗಿ ಸಂಪಾದಿಸಲಿಕ್ಕಾಗಿ ಸಿದ್ಧನಾದನು.

ಮಾರನೆಯ ವರ್ಷದಲ್ಲಿ ರಾಜಧಾನಿಯಲ್ಲಿ ನಡೆಯುವ ಸ್ಪರ್ಧೆಗಾಳಿಗೆ ಕುಮಾರವರ್ಮನು ತನ್ನ ಸೈನ್ಯವನ್ನು ರಹಸ್ಯ ರೀತಿಯಲ್ಲಿ ಕರೆದುಕೊಂಡು, ಸ್ಪರ್ಧೆಯಲ್ಲಿ ಭಾಗವಹಿಸಿದನು. ಯುದ್ಧಕ್ಕೆ ಸಂಬಂಧಿಸಿದ ಎಲ್ಲಾ ವಿದ್ಯೆಗಳಲ್ಲಿಯೂ ಕುಮಾರವರ್ಮನೇ ಗೆದ್ದನು.

ಆಮೇಲೆ ಪದ್ಧತಿಯಂತೆ ಭೈರವನು ಅವನೊಂದಿಗೆ ಖಡ್ಗ ಯುದ್ಧಕ್ಕೆ ನಿಲ್ಲಲು, ಕುಮಾರವರ್ಮನು ಅವಲೀಲೆಯಿಂದ ಭೈರವನ ಕತ್ತಿಯನ್ನು ಹಾರಿಸಿ, ತನ್ನ ಕತ್ತಿಯನ್ನು ಭೈರವನ ಎದೆಗೆ ಆನಿಸಿ, ಅಲ್ಲಿ ಸೇರಿದ ಪ್ರಜೆಗಳನ್ನು ನೋಡಿ, "ಈ ದುಷ್ಟನು ನನ್ನನ್ನು ಕೊಲ್ಲಬೇಕೆಂದು ಕೆಲಸ ಮಾಡಿದ ವಿಶ್ವಾಸ ದ್ರೋಹಿ. ಆಗ ನಿಜವಾದ ವಿಶ್ವಾಸಿಕರ ಎಚ್ಚರಿಕೆ ಸಕಾಲದಲ್ಲಿ ಬಂದುದರಿಂದ ನಾನು ಜೀವದೊಂದಿಗೆ ಹೊರಬಿದ್ದೆ. ನಾನೇ ಹಿಂದೆ ನಿಮ್ಮೆಲ್ಲರಿಗೂ ರಾಜನಾಗಿದ್ದ ಕುಮಾರವರ್ಮ. ಈ ಭೈರವನು ಪ್ರಜೆಗಳಿಗೆ ಸುಖವಾಗುವಂತೆ ರಾಜ್ಯಪಾಲನೆ ಮಾಡಿಕೊಂಡಿರುತ್ತಿದ್ದರೆ ನಾನೂ ಸುಮ್ಮನಿರುತ್ತಿದ್ದೆ. ಪ್ರಜೆಗಳ ಕ್ಷೇಮಕ್ಕಾಗಿಯೇ ನಾನು ಮುಂದೆ ಬಂದಿದ್ದೇನೆ. ನನ್ನನ್ನು ಮತ್ತೆ ರಾಜನನ್ನಾಗಿ ನೀವೆಲ್ಲಾ ಅಂಗೀಕರಿಸುವಿರಾ? ಅಥವಾ ಸಿಂಹಾಸನಕ್ಕಾಗಿ ನಾನು ಯುದ್ಧವನ್ನೇ ಮಾಡಬೇಕೇ?" ಎಂದು ಹೇಳಿ ತನ್ನ ವೇಷವನ್ನು ಕಳಚಿ ನಿಜರೂಪದಲ್ಲಿ ನಿಂತನು.

ಎಲ್ಲರೂ ಕುಮಾರವರ್ಮನನ್ನು ಗುರುತಿಸಿ ಜಯಜಯಧ್ವಾನ ಮಾಡಿದರು. ರಕ್ತಪಾತವಿಲ್ಲದೆ ರಾಜ್ಯವು ಮರಳಿ ಕುಮಾರವರ್ಮನದಾಯಿತು.

ಎಲ್ಲಾ ಮೊದಲಿನಂತಾದ ಮೇಲೆ ರಾಣಿ ಕರ್ಪೂರವಲ್ಲಿ ತನ್ನ ಗಂಡನೊಂದಿಗೆ, "ನೀವೇ ಕುಮಾರವರ್ಮನೆಂದು ನಿಮ್ಮ ಸೈನಿಕರೊಂದಿಗೆ ಮೊದಲೇ ತಿಳಿಸಿದ್ದರೆ ಎಂದೋ ನೀವು ನಿಮ್ಮ ರಾಜ್ಯವನ್ನು ವಶಪಡಿಸಿಕೊಳ್ಳಬಹುದಿತ್ತಷ್ಟೆ?" ಎಂದು ಕೇಳಿದಳು.

"ಈಸಾರಿ ರಾಜ್ಯವನ್ನು ವಾರಸತ್ವದಿಂದಲ್ಲದೆ ನೀನು ಹೇಳಿದಂತೆ ಸ್ವಶಕ್ತಿಯಿಂದ ಸಂಪಾದಿಸಬೇಕೆಂದು ಮಾಡಿದೆ. ಈಗ ನನ್ನ ಶಕ್ತಿಯಲ್ಲಿ ನನಗೆ ನಂಬುಗೆಯುಂಟಾದುದರಿಂದ, ಇನ್ನು ಮೇಲೆ ನಾನು ನಿರ್ವಹಿಸುವ ಸ್ಪರ್ಧೆಗಳಲ್ಲಿ ನಾನು ಭಾಗವಹಿಸುವ ಅಗತ್ಯವಿಲ್ಲ." ಎಂದ ಕುಮಾರವರ್ಮ.

ಆಮೇಲೆ ಕುಮಾರವರ್ಮನು ಪ್ರಜೆಗಳೊಂದಿಗೆ ಬೆರೆತ ಅನುಭವದಿಂದ ಪ್ರಜಾರಂಜಕವಾಗಿ ಪರಿಪಾಲನೆ ಮಾಡಿದನು. ಪ್ರತಿವರ್ಷ ಅವನು ನಡೆಸುವ ಸ್ಪರ್ಧೆಗಳಲ್ಲಿ ನಿಜವಾದ ಸಮರ್ಥರೇ ಗೆದ್ದರು.





# ದೈವಾಧೀನರು

ಅನೇಕ ವರ್ಷಗಳ ಹಿಂದೆ , ಮಧುರಪುರವೆಂಬಲ್ಲಿ ಗೋಪಣ್ಣನೆಂಬ ಯುವಕನು ಯಾವ ಕೆಲಸವೂ ಇಲ್ಲದೆ ಸುಮ್ಮನೆ ತಿರುಗಾಡುತ್ತ ಕಾಲಹರಣ ಮಾಡುತ್ತಿದ್ದ. ಒಂದು ದಿನ ಅವನ ಗ್ರಾಮಕ್ಕೆ ಸೇರಿದ ದುರ್ಗಾಲಯದ ಅರ್ಚಕ ಈಶ ಪೂಜಾರಿಯ ದೃಷ್ಟಿ ಅವನ ಮೇಲೆ ಬಿತ್ತು. ಈಶ ಪೂಜಾರಿಗೆ ಗೋಪಣ್ಣನಂತಹನ ಅಗತ್ಯ ತುಂಬಾ ಇದ್ದಿತು.

ಗ್ರಾಮವು ಕಷ್ಟದಲ್ಲಿರುವಾಗ ಗ್ರಾಮಸ್ಥರು ಎಲ್ಲದಕ್ಕೂ ದುರ್ಗಾದೇವಿಯನ್ನೇ ನಂಬಿ ಬಗೆ ಬಗೆಯ ಹರಕೆಗಳನ್ನು ಒಪ್ಪಿಸುತ್ತಿದ್ದರು. ಆದರೆ ಇತ್ತೀಚೆಗೆ ಗ್ರಾಮಗಳಲ್ಲಿ ಅನೇಕ ಸೌಕರ್ಯಗಳು ಏರ್ಪಟ್ಟುದರಿಂದ ತೋಟಗಳೂ ಹೊಲಗದ್ದೆಗಳೂ ಒಳ್ಳೆಯ ಫಸಲು ಕೊಡುತ್ತಿದ್ದುವು. ಬರುವ ರೋಗಗಳು, ವೈದ್ಯಕೀಯ ಸೌಕರ್ಯಗಳಿಂದ ದುರ್ಗಾದೇವಿಯ ಅನುಗ್ರಹವಿಲ್ಲದೆ ಗುಣವಾಗುತ್ತಿದ್ದುವು.

ಹೀಗೆ ದಿನದಿಂದ ದಿನಕ್ಕೆ ಗ್ರಾಮಸ್ಥರಿಗೆ ದೇವಿಯ ಭಯವು ತಗ್ಗುತ್ತಾ ಹೋಗುತ್ತಿದ್ದಂತೆ ಈಶ ಪೂಜಾರಿಗೆ ಆದಾಯವು ಕುಗ್ಗುತ್ತಾ ಹೋಗುತಿತ್ತು. ಹೀಗಾಗದಂತೆ ತಡೆಯಲು ಏನೋ ಒಂದು ನಾಟಕ ಮಾಡಿಸಬೇಕಾಗಿತ್ತು. ಅದಕ್ಕೆ ಬೇಕಾದ ವ್ಯಕ್ತಿ ಗೋಪಣ್ಣನಂತೆ ಸುಮ್ಮನೆ ತಿರುಗಾಡವವನೇ ಆದುದರಿಂದ ಈಶಪೂಜಾರಿ ಗೋಪಣ್ಣನನ್ನು ಕರೆದು ಅಕ್ಕರೆಯಿಂದ ಮಾತಾಡಿಸಿದನು. ಭಕ್ತರು ದೇವಿಗೆ ಕೊಟ್ಟ ಏನೋ ಇಷ್ಟು ನೈವೇದ್ಯದ ಪ್ರಸಾದವನ್ನು ಅವನಿಗೆ ತಿನ್ನಲು ಕೊಟ್ಟನು. ಅವನ ಸುಖದುಃಖಗಳನ್ನು ವಿಚಾರಿಸಿ, ಕೈಗೆ ಸ್ವಲ್ಪ ಚಿಲ್ಲರೆ ಕಾಸುಗಳನ್ನೂ ಕೊಟ್ಟನು. ಹೀಗೆ ಆಗಾಗ ನಡೆಸಿದನು.

ಒಂದು ದಿನ ಈಶ ಪೂಜಾರಿ ಗೋಪಣ್ಣನೊಂದಿಗೆ, "ಅಪ್ಪಾ ಗೋಪೂ, ನಾನು ಹೇಳುವ ಒಂದು ಕೆಲಸ ಮಾಡಿದೆಯೆಂದರೆ, ನಿನಗೆ ಈಗ ಇರುವ ತಿರುಗೂಳಿ ತಿಮ್ಮಣ್ಣನೆಂಬ ಕೆಟ್ಟ ಹೆಸರು ಹೋಗಿ ದೊಡ್ಡ ಹೆಸರು ಬಂದುಬಿಡುತ್ತೆ. ನಮ್ಮ ಉಪಾಯ ಸರಿಯಾಗಿ ನಾಟಿ, ಲಾಭ ಬರಲು ಶುರುವಾದರೆ ನಿನಗೊಂದು ಲೆಕ್ಕದಲ್ಲಿ ಸಂಬಳವನ್ನೂ ಕೊಡುತ್ತೇನೆ" ಎಂದು ಹೇಳಿ, ಗೋಪಣ್ಣ ಮಾಡಬೇಕಾದ ಕಾರ್ಯಕ್ರಮಗಳನ್ನೂ ತಿಳಿಸಿ ಒಪ್ಪಿಸಿಯೂ ಬಿಟ್ಟನು.

ಆ ದಿನ ಸಾಯಂಕಾಲ ಗೋಪಣ್ಣ ಮನೆಗೆ ಬಂದವನೇ, "ಹೋ !" ಎಂದು ಕೂಗಿ ದಢಾಲನೆ

ವಿ. ಎಸ್. ನಾರಾಯಣ



ಬಿದ್ದು ಕಣ್ಣು ತಿರುಗಿಸುತ್ತ ಕೈಕಾಲು ಬಡೆದುಕೊಳ್ಳ ತೊಡಗಿದನು. ಆವನ ತಾಯಿತಂದೆಯರು ಪಿತ್ಥ ವಿಕಾರವೆಂದುಕೊಂಡು ಅತ್ತಿತ್ತ ಓಡಿ ಬೇರುನಾರು ತಂದರು. "ಸಿಕ್ಕಿದಲ್ಲಿ ತಿರುಗಿ ಏನೇನು ತಿಂದು ಬಂದೆಯೋ ಕತ್ತೆ!" ಎಂದು ಬೈಯುತ್ತ ತಂದೆ ಆವನಿಗೆ ಹೊಡೆಯಲು ಕೈ ಎತ್ತಿದಾಗ, ಗೋಪಣ್ಣ ತಂದೆಗೆ ಎದುರು ತಿರುಗಿ ಕೆಂಗಣ್ಣಿನಿಂದ ನೋಡುತ್ತಾ "ಮೂಢಾ! ನುಂಗುತ್ತೇನೆ ನಿನ್ನ!..." ಎಂದು ಕರ್ಕಶವಾಗಿ ಕೂಗಿದನು.

ಈ ವಿಚಿತ್ರ ನೋಡಲು ಗುಂಪುಗೂಡಿದ ದಾರಿ ಹೋಕರು ಕೆಲವರು. "ಈ ಹುಡುಗನ ಮೈಮೇಲೆ ದೇವಿ ಬಂದಿದ್ದಾಳೆ!" ಎಂದರು. "ಹೌದು ಹೌದು!" ಎನ್ನುತ್ತ ಅನೇಕರು ಕೈಮುಗಿದರು.

ಅಷ್ಟರಲ್ಲಿ ಯಾರೋ ಕರೆದಂತೆ ಈಶ ಪೂಜಾರಿ ಕೈಯಲ್ಲಿ ಬೇವಿನಸೊಪ್ಪಿನ ರೆಂಬೆಗಳೊಂದಿಗೆ ಓಡೋಡಿ ಬಂದು "ಯಾರಮ್ಮಾ ನೀನು? ಏನು ಬೇಕು ತಾಯೀ?" ಎಂದು ಪ್ರಶ್ನೆ ಮಾಡಿದನು. ಗೋಪಣ್ಣ ಟಣ್ಣನೆ ಹಾರಿ ಈಶ ಪೂಜಾರಿಯ ಜುಟ್ಟು ಹಿಡಿದು ಮೇಲೆ ಕೆಳಗೆ ಆಡಿಸಿ ಹಿಂದಕ್ಕೆ ತಳ್ಳಿ, "ಛೀ! ಶುಂಠಾ! ನನ್ನ ಗುರುತು ಇಲ್ಲವೆ ಮೂಢಾ"? ಎಂದನು. ಕೆಳಗೆ ಬಿದ್ದ ಪೂಜಾರಿ ಹಾಗೆಯೇ ಸಾಷ್ಟಾಂಗ ಹೊರಳಿ, "ನೀನಾ ತಾಯೀ! ದುರ್ಗಾಂಬಾ! ರಕ್ಷಿಸು! ಕ್ಷಮಿಸು!" ಎಂದು ಬೇಡಿಕೊಂಡನು.

"ನುಂಗಿಬಿಡುತ್ತೇನೆ. ನನ್ನ ಹಸಿವೆಯ ಲಕ್ಷ್ಯ ಯಾರಿಗಾದರೂ ಇದೆಯೇ? ಊರನ್ನೇ ಸುಡುಗಾಡು ಮಾಡಿಬಿಡುತ್ತೇನೆ!" ಎಂದ ಗೋಪಣ್ಣ.

"ಇಗೋ ಭರವಸೆ ಕೊಟ್ಟೆ. ನಿನ್ನ ಹಸಿವೆಯನ್ನು ತೀರಿಸುತ್ತೇವೆ. ನಂಬು," ಎಂದ ಈಶಪೂಜಾರಿ.

ಆಮೇಲೆ ಗೋಪಣ್ಣ ಮೂರ್ಛೆ ಬಂದವನಂತೆ ಸ್ತಬ್ಧನಾಗಿಬಿಟ್ಟ. ಜನರು ಆವನ ಮುಖಕ್ಕೆ ನೀರು ಚಿಮುಕಿಸಿದ ಮೇಲೆ ಅವನು ನಿದ್ದೆಯಿಂದೆದ್ದವನಂತೆ ಎದ್ದು ತುಂಬಾ ನಿತ್ರಾಣವನ್ನು ಅಭಿನಯಿಸಿದ.

ಈ ನಾಟಕ ವ್ಯರ್ಥವಾಗಲಿಲ್ಲ; ಗ್ರಾಮದ ಜನರು ದುರ್ಗಾದೇವಿಗೆ ಹೆದರಿ ದೇವಾಲಯಕ್ಕೆ ಹರಕೆ ಕಾಣಿಕೆಗಳನ್ನು ಹೆಚ್ಚು ಹೆಚ್ಚಾಗಿ ಕೊಡತೊಡಗಿದರು. ಈಶಪೂಜಾರಿಗೆ ಒಳ್ಳೆಯ ದಕ್ಷಿಣೆಯೂ ಸಿಗತೊಡಗಿತು. ದೇವಿಗೆ ಪ್ರಿಯವಾದ ಶರೀರದವನಾದ ಮೇಲೆ ಗ್ರಾಮದವರು ಗೋಪಣ್ಣನನ್ನು ಗೌರವದಿಂದ ನೋಡತೊಡಗಿದರು. ಅವನು ಪ್ರತಿದಿನ ಸಾಯಂಕಾಲದಲ್ಲಿ ದೇವಾಲಯಕ್ಕೆ ಹೋಗಿ, ರಾತ್ರಿಯವರೆಗೂ ಇದ್ದು ಈಶಪೂಜಾರಿ ಕೊಟ್ಟ ರುಚಿಯಾದ ಪ್ರಸಾದಗಳನ್ನು ಮನೆಗೂ ತಂದು ಕೊಡುತ್ತಿದ್ದನು.

ದೇವಿಯ ಮೇಲೆ ಭಕ್ತಿ ವಿಶ್ವಾಸಗಳು ಬೆಳೆದ ಮೇಲೆ ಗ್ರಾಮಸ್ಥರು ಪ್ರತಿಯೊಂದಕ್ಕೂ ಆ ದೇವಿಯನ್ನೇ ನಂಬಲು ತೊಡಗಿದರು. ಸುಮಾರಾಗಿ ಆ ಊರಿನ ಎಲ್ಲರೂ ದಿನಾ ದುರ್ಗಾದೇವಿಯ

ಆಲಯಕ್ಕೆ ಹೋಗಿ ಪ್ರದಕ್ಷಿಣೆ ನಮಸ್ಕಾರಗಳನ್ನಾದರೂ ಮಾಡುತ್ತಿದ್ದರು. ಎಲ್ಲದಕ್ಕೂ ಆ ದೇವಿಯೇ ಗತಿ ಎಂಬಂತಾಯಿತು. ಜನರು ಹೀಗೆ ಬದಲಾಯಿಸಿದುದನ್ನು ನೋಡುತ್ತಿದ್ದಂತೆ ಗೋಪಣ್ಣನ ಮನಸ್ಸೂ ಬದಲಾಯಿಸುತ್ತಾ ಹೋಯಿತು.

ಗೋಪಣ್ಣನು ಈಶಪೂಜಾರಿಯನ್ನು ನೋಡಿ, ಇನ್ನು ಮೇಲೆ ತಾನು ದೇವಿ ಮೈಮೇಲೆ ಬಂದ ಹಾಗೆ ನಟಿಸಲು ಸಾಧ್ಯವಿಲ್ಲವೆಂದು ಹೇಳಿಬಿಟ್ಟನು. ಈಶ ಪೂಜಾರಿ ಇನ್ನೂ ಹೆಚ್ಚು ಹಣ ಕೊಡುತ್ತೇನೆಂದರೂ, ದಿನಾ ಅಲ್ಲದಿದ್ದರೂ ವಾರಕ್ಕೆ ಒಂದೆರಡುಸಾರಿಯಾದರೂ ನಟಿಸಿದರೆ ಸಾಕೆಂದು ಹೇಳಿದರೂ ಗೋಪಣ್ಣ ಒಪ್ಪಲಿಲ್ಲ.

"ಹಾಗಾದರೆ ನಾನು ಮೈಮೇಲೆ ಬಂದಂತೆ ನಟಿಸುತ್ತೇನೆ. ನೀನು ಬೇವಿನ ಸೂಡಿ ಹಿಡಿದುಕೊಂಡು ನನಗೆ ಸಮಾಧಾನ ಹೇಳುವವನಾಗಿ ನಟಿಸು" ಎಂದ ಈಶ ಪೂಜಾರಿ.

ಗೋಪಣ್ಣ ಸ್ವಲ್ಪ ಮೆತ್ತಗಾದನು. ಹಣದ ಆಸೆ ಅವನನ್ನು ಮತ್ತೆ ಚಂಚಲಕ್ಕೀಡುಮಾಡಿತು. ಕೆಲವು ದಿನ ಹಾಗೂ ನಡೆಯುತೊಡಗಿತು. ತನ್ನ ಮನೆಯವರಿಗೆ ಕೂಡಾ ದೈವಾಧೀನದ ರೋಗ ಹೆಚ್ಚುತ್ತಾ ಹೋಗುವುದನ್ನು ನೋಡಿ, ಮನೆಯವರೊಂದಿಗೆ ನಿಜ ಸಂಗತಿ ಹೇಳಿಬಿಡಬೇಕೆಂತಲೂ ಗೋಪಣ್ಣನಿಗೆ ತೋರಿತು.

ಈ ನಡುವೆ ಈಶಪೂಜಾರಿಗೆ ಇನ್ನೊಂದು ಹೊಸ ಆಲೋಚನೆ ಬಂದಿತು. ಅದೇನೆಂದರೆ, ಗೋಪಣ್ಣ ದಿನಾ ರಹಸ್ಯವಾಗಿ ಗುಡಿಯೊಳಗೆ ಹೊಕ್ಕು, ದುರ್ಗಮ್ಮನ ವಿಗ್ರಹದ ಮರೆಯಲ್ಲಿ ಅಡಗಿದ್ದುಕೊಂಡು, ಯಾರಿಗೂ ಕಾಣದಂತೆ ಅಳವಡಿಸಲ್ಪಟ್ಟ ಹಗ್ಗವನ್ನು ಎಳೆಯಬೇಕು. ಆಗ ದೇವಾಲಯದ ಬಾಗಿಲು ತನ್ನಂತೆ ತೆರೆದುಕೊಳ್ಳುತ್ತದೆ. ಭಕ್ತರು ಬರುವ ಸಮಯದಲ್ಲೇ ಹಾಗೆ ಬಾಗಿಲು ತೆರೆಯುವುದರಿಂದ, ತಮ್ಮ ಭಕ್ತಿಗೆ ಒಲಿದೇ ದೇವಿ ಬಾಗಿಲು



ತೆರೆಯುವಳೆಂದು ಭಕ್ತರು ನಂಬಿ ಸಂತೋಷದಿಂದ ವಿಶೇಷ ಕಾಣಿಕೆ ಸಲ್ಲಿಸುತ್ತಾರೆ.

ಈ ಉಪಾಯವನ್ನು ಈಶಪೂಜಾರಿ ಗೋಪಣ್ಣನಿಗೆ ಹೇಳಿ ಒಪ್ಪಿಸಿದನು. ಅದು ಕೂಡಾ ಜಯಪ್ರದವಾಗಿ ಅಮಲಾಗತೊಡಗಿತು. ಗ್ರಾಮಸ್ಥರಿಗೆ ದುರ್ಗಾದೇವಿಯ ಮೇಲೆ ಗಟ್ಟಿಮುಟ್ಟಾದ ಕುರುಡು ನಂಬುಗೆಯುಂಟಾಯಿತು. ಅವರು ಶ್ರಮಪಟ್ಟು ದುಡಿಯುವುದನ್ನು ಬಿಟ್ಟು, ಯಾವಾಗಲೂ ದೇವಿಯ ಭಜನೆ ಮಾಡುತ್ತ ಕಾಲ ಕಳೆಯುತೊಡಗಿದರು. ಹೊಲಗದ್ದೆಗಳಿಗೆ ಹೋಗುವುದನ್ನು ಬಿಟ್ಟರು.

ಹೀಗೆಯೇ ಬಿಟ್ಟರೆ ತಮ್ಮ ಗ್ರಾಮವು ನಾಶವಾಗಿ ಹೋಗುವುದೆಂದು ಗೋಪಣ್ಣನು ತನ್ನಲ್ಲೇ ತಳಮಳಿಸತೊಡಗಿದನು. ಅವನಿಗೆ ಈಶಪೂಜಾರಿಯ ಮೇಲೆ ಬಹಳ ಕೋಪವೂ ಅಸಹ್ಯವೂ ಉಂಟಾಯಿತು.

ಮರುದಿನದಿಂದ ದೇವಾಲಯದ ಬಾಗಿಲು ತನ್ನಂತಾನೇ ತೆರೆದುಕೊಳ್ಳುವುದು ನಿಂತಿತು. ಅದನ್ನು

ನೋಡಿ ಭಕ್ತರು ಇನ್ನೇನು ಕೇಡುಗಾಲ ಬರುವುದೋ ಎಂದು ಭಯಭ್ರಾಂತಿಗೊಳಗಾದರು. ಈಶಪೂಜಾರಿ ತನ್ನ ಮನಸ್ಸಿನಲ್ಲಿಯೇ ಗೋಪಣ್ಣನನ್ನು ಬೈದನು.

ಗೋಪಣ್ಣನು ಬೆಳಗಾಗಿ ಬಿಸಿಲಿಗೆ ಬಿಸಿಮುಟ್ಟುವ ಹೊತ್ತಿಗೆ ಬೇವಿನಸೊಪ್ಪಿನ ರೆಂಬೆಗಳನ್ನು ಹಿಡಿದು ಕೊಂಡು ದೇವಾಲಯಕ್ಕೆ ಬಂದನು. ಏನೋ ತಪ್ಪು ನಡೆದಿರಬೇಕೆಂದೂ, ಅದನ್ನು ಸರಿಮಾಡಲಿಕ್ಕೇ ಗೋಪಣ್ಣ ಬೇವಿನಸೊಪ್ಪಿನೊಂದಿಗೆ ಬಂದಿದ್ದಾನೆಂದೂ ಈಶಪೂಜಾರಿ ಅಂದುಕೊಂಡು, ತನ್ನ ಮೇಲೆ ದೇವಿಯ ಆವೇಶವಾದವನಂತೆ ನಟಿಸಿ ಹಾಹೂ ಅನ್ನುತ್ತ, "ಕೊಂದುಬಿಡುತ್ತೇನೆ! ತಿಂದುಬಿಡುತ್ತೇನೆ! ನನ್ನ ನೈವೇದ್ಯಕ್ಕೆ ಎಲ್ಲಾ ಬೆಳೆಯನ್ನೂ ಕಾಣಿಕೆ ಕೊಡ ಬೇಕು! ತಪ್ಪಿದಿರಾ, ಎಲ್ಲಾ ಸುಟ್ಟು ಬಿಡುತ್ತೇನೆ!" ಎಂದು ಕೂಗಾಡತೊಡಗಿದನು.

ಗೋಪಣ್ಣ "ಶಾಂತಿ! ಶಾಂತಿ! ಹಾಗೇ ಆಗಲಿ! ಸಮಾಧಾನ, ಸಮಾಧಾನ..." ಎನ್ನುತ್ತಾ ಬೇವಿನ ಸೊಪ್ಪಿನಿಂದ ಈಶಪೂಜಾರಿಯನ್ನು ಹೊಡೆದು ಪೂಸತೊಡಗಿದ. ಬೇವಿನ ಸೊಪ್ಪುಗಳ ಮಧ್ಯದಲ್ಲಿ ಅವನು ತುರುಚೇ ತೊಪ್ಪಲವನ್ನೂ ಸೇರಿಸಿ ಕಟ್ಟಿದು ದರಿಂದ ಈಶಪೂಜಾರಿಗೆ ಶರೀರಾದ್ಯಂತವೂ ತಾಳ ಲಾಗದಷ್ಟು ತುರಿಕೆ ಪ್ರಾರಂಭವಾಗಿ ಇನ್ನೂ ಜೋರಾಗಿ ಕೂಗಿದನು.

ಗೋಪಣ್ಣ ಅವನ ಮೇಲೆ ಸೊಪ್ಪಿನಿಂದ ಹೊಡೆ ಯುತ್ತ, "ಇಳಿದು ಹೋಗುತ್ತೀಯಾ ಇಲ್ಲವಾ? ಈ ಗ್ರಾಮದಿಂದಲೇ ಓಡಿಹೋಗುತ್ತೀಯಾ ಇಲ್ಲವಾ? ಇದ್ದದ್ದೆಲ್ಲಾ ನಿನ್ನ ಗಂಟಲಿಗೇ ತಂದುಸುರೀಲಿಕ್ಕೆ ಇಲ್ಲಿ ನಿಧಿ ಹುಗಿದಿದೆಯಾ?" ಎಂದನು.

ಈಶಪೂಜಾರಿಯ ಆಟಗಳೆಲ್ಲ ಕಟ್ಟಾಗಿ ಹೋದುವು. ತುರಿಕೆಯನ್ನೂ ಹೊಡೆತದ ಕಾಟವನ್ನೂ ಸಹಿಸಿ ಮೈ ಮೇಲೆ ಬಂದಂತೆ ನಟಿಸಲಿಕ್ಕೇ ಸಾಧ್ಯವಾಗದೆ ಹೋಯಿತು. "ಹೋಗುತ್ತೇನೆ! ನನಗೇನೂ ಬೇಡಾ" ಎಂದು ಕೂಗುತ್ತಾ ಸ್ಮೃಹೆತಪ್ಪಿ ಬಿದ್ದುಬಿಟ್ಟ.

ಗೋಪಣ್ಣನು ಆಶ್ಚರ್ಯದಿಂದ ನೋಡುತ್ತಿರುವ ಭಕ್ತರೊಂದಿಗೆ, "ದೇವಿ ಗ್ರಾಮದಿಂದಲೇ ಹೊರಟು ಹೋದಳು. ಇಷ್ಟು ಹೊತ್ತಿಗೆ ಕಾಡಿನ ದಾರಿಯಲ್ಲಿ ದ್ದಾಳು. ನಮ್ಮ ಕೆಲಸ ನಾವು ಮಾಡಿಕೊಂಡಿರುವ ವರೆಗೂ ಅವಳು ನಮ್ಮ ತಂಟೆಗೆ ಬರುವುದಿಲ್ಲ. ಪೀಡೆ ಹೋಯಿತು." ಎಂದನು.

ಆಮೇಲೆ ದೇವಿಯ ಆಲಯವು ಹಾಳುಬೀಳ ಲಿಕ್ಕೂ, ಗ್ರಾಮವು ಅಭಿವೃದ್ಧಿಗೇರಲಿಕ್ಕೂ ಬಹಳ ಕಾಲ ಹಿಡಿಯಲಿಲ್ಲ. ಈಶಪೂಜಾರಿ ಕೂಡಾ ವ್ಯವಸಾಯಕ್ಕೇ ಇಳಿದನು. ಸಿಕ್ಕಿದಲ್ಲಿ ತಿರುಗಿಕೊಂಡಿದ್ದ ಗೋಪಣ್ಣ ದುರ್ಗಾದೇವಿಯನ್ನು ಹೆದರಿಸಿ ಓಡಿಸಿ ದವನೆಂದು ಹೆಸರು ಪಡೆದುಕೊಂಡನು.



# ಬಲಿಯ ಆಶ್ಚರ್ಯ

ಅಶ್ವಮೇಧ ಯಾಗಮಾಡಿ ಅಪಾರ ದಾನಧರ್ಮಗಳನ್ನು ಮಾಡಿದ ಧರ್ಮರಾಜನಿಗೆ, ಪ್ರಪಂಚದಲ್ಲಿ ತನ್ನನ್ನು ಮೀರಿಸುವ ದಾತರು ಯಾರೂ ಇರಲಾರರೆಂದು ಗರ್ವಬಂದಿತು.

ಇದು ಕೃಷ್ಣನಿಗೆ ಗೊತ್ತಾಯಿತು. ಅವನು ಒಮ್ಮೆ ಕೃಷ್ಣನನ್ನು ಪಾತಾಳಕ್ಕೆ ಕರೆದುಕೊಂಡು ಹೋದನು. ಅಲ್ಲಿಯ ರಾಜನಾದ ಬಲಿ, ಕೃಷ್ಣನಿಗೆ ತುಂಬ ಮರ್ಯಾದೆ ಮಾಡಿದನೇ ಹೊರತು ಧರ್ಮರಾಜನನ್ನು ಮಾತಾಡಿಸಲೂ ಇಲ್ಲ.

ಆದುದರಿಂದ ಕೃಷ್ಣನು ಅವನಿಗೆ ಧರ್ಮರಾಜನ ಪರಿಚಯ ಮಾಡಿಸುತ್ತ, " ಈ ಧರ್ಮರಾಜನು ಮಾಡಿದಷ್ಟು ದಾನಧರ್ಮಗಳನ್ನು ಯಾವ ಯುಗದಲ್ಲಿಯೂ ಯಾರೂ ಮಾಡಿರಲಾರರು " ಎಂದನು.

ಬಲಿಚಕ್ರವರ್ತಿ ಕಿವಿಗಳನ್ನು ಮುಚ್ಚಿಕೊಂಡು, "ಎಂಥ ಹಾಳು ಮಾತು ಕೇಳಿದೆ ! ದಾನಧರ್ಮ ಮಾಡಿ ದೊಡ್ಡವನೆನಿಸುವುದಕ್ಕಿಂತ ಹೀನತೆ ಇನ್ನೇನಿದೆ ? ನನ್ನ ರಾಜ್ಯದಲ್ಲಿ ಧಾನಧರ್ಮ ಮಾಡುವೆನೆಂದರೆ ಯಾರಾದರೂ ಬರುತ್ತಾರೆಯೇ ? ಎಲ್ಲರೂ ನನ್ನ ಹಾಗಿನವರೇ !" ಎಂದನು.

ಈ ಮಾತುಗಳನ್ನು ಕೇಳಿ ಧರ್ಮರಾಜನು ತಲೆಬಾಗಿಸಿದನು.





# ಧನದ ಗುಣ

[illegible]ಪುರವೆಂಬ ಗ್ರಾಮದವರು ಹೆಚ್ಚಾಗಿ ವ್ಯವಸಾಯವನ್ನೇ ನಂಬಿಕೊಂಡಿರುವವರು. ಅಲ್ಲಿನವರು ವ್ಯವಸಾಯದಲ್ಲಿ ಒಳ್ಳೆಯ ಸಮರ್ಥರೂ ಹೌದು. ಕಷ್ಟಪಟ್ಟು ಸಾಧನೆಮಾಡಿ ಒಳ್ಳೆಯ ಬೆಳೆಯನ್ನೇ ತೆಗೆಯುತ್ತಿದ್ದರು. ಆದರೆ ಅವರದು ಸುಖಜೀವನವಾಗಿರಲಿಲ್ಲ. ಕಾರಣ ಅವರಿಗೆ ಮಿತ ಖರ್ಚು ಮಾಡಬೇಕೆಂಬ ಆಲೋಚನೆಯಿಲ್ಲ. ಕಣ್ಣುಮುಚ್ಚಿ ಬೇಕಾದ ಹಾಗೆ ಖರ್ಚು ಮಾಡಿ, ದೊಡ್ಡ ದೊಡ್ಡ ರೈತರಿಗೆ ಋಣಿಗಳಾಗುತ್ತಿದ್ದರು. ಬೆಳೆ ಕೈಗೆ ಬಂದಾಗ ಸಾಲ ಬಡ್ಡಿಗಳಿಗೇ ಸರಿಯಾಗುತಿತ್ತು. ಅವರ ದಾರಿದ್ರ್ಯಕ್ಕೂ ಸಂಕಟಗಳಿಗೂ ವಿಮೋಚನೆಯೇ ಇಲ್ಲ.

ಜುಗಲ್ ಪ್ರಸಾದನೆಂಬವನು ಭಾರೀ ದೊಡ್ಡ ರೈತಕುಳ. ದೊಡ್ಡ ಧನಿಕನಾದ ಅವನಿಗೆ ಮಕ್ಕಳೇ ಇರಲಿಲ್ಲ. ಅಂಥವನು ಬಹಳ ದೀಕ್ಷೆ ವಹಿಸಿ ಹಣವನ್ನು ಸೇರಿಸಿಡುತ್ತ, ಖರ್ಚು ಮಾಡಬೇಕೆಂದರೆ [illegible]ವಿಲಿ ಒದ್ದಾಡುವನು,

ಅದೇ ಗ್ರಾಮದಲ್ಲಿ ಮತ್ತಿಬ್ಬರು ಧನಿಕರಿದ್ದರು. [illegible]ರು ಜುಗಲ್ ಪ್ರಸಾದನಷ್ಟು ದೊಡ್ಡ ಧನಿಕರಲ್ಲ[illegible] ಬಡ ರೈತರಿಗೆ ಹಣವನ್ನೂ ಧಾನ್ಯವನ್ನೂ ಸಾಲಕೊಟ್ಟು, ಆಮೇಲೆ ತಮಗೆ ಬರಬೇಕಾದುದನ್ನು ನಿರ್ದಾಕ್ಷಿಣ್ಯವಾಗಿ ಬಡರೈತರನ್ನು ಬಡ್ಡಿಯೊಂದಿಗೆ ಹಿಂಡಿಸೋಸಿ ವಸೂಲಿಸಿಕೊಳ್ಳುವವರು.

ಗ್ರಾಮಸ್ಥರೆಲ್ಲ ನಿರಕ್ಷರಕುಕ್ಷಿಗಳು. ಆದರಿಗೆ ತಮ್ಮ ಕಷ್ಟ ಕೆಲಸಗಳ ಹೊರತು ಮತ್ತೇನೂ ತಿಳಿಯದು. ಆದರೆ ಆ ಊರಿನಲ್ಲಿರುವ ಅಕ್ಕಸಾಲಿಗನ ಮಗ ಗೋಪಾಲನೆಂಬವನು ಸತೀಪುರಕ್ಕೆ ಮೂವತ್ತು ಮೈಲು ದೂರವಿರುವ ಪಟ್ಟಣದಲ್ಲಿ ಚೆನ್ನಾಗಿ ವಿದ್ಯಾಭ್ಯಾಸ ಮಾಡಿಕೊಂಡಿದ್ದನು. ಹಳ್ಳಿಯಲ್ಲಿ ಹುಟ್ಟಿ ನಗರದಲ್ಲಿ ಕಾಲ ಕಳೆದವನಾದುದರಿಂದ ಅವನಿಗೆ ಪ್ರಪಂಚಜ್ಞಾನವು ಹೆಚ್ಚಾಗಿದ್ದಿತು. ತನ್ನ ಊರಿನವರು ಸಾಲಗಾರರಾಗುತ್ತ ಎಂತಹ ನಿಕೃಷ್ಟಜೀವನದಲ್ಲಿ ತೊಳಲುತ್ತಿದ್ದಾರೆಂಬುದು ಅವನಿಗೆ ಗೊತ್ತಿತ್ತು. ಆದಕ್ಕಾಗಿ ಅವನು ಚಿಂತೆಗೊಳಗಾಗಿದ್ದನು. ಗ್ರಾ[illegible]ಗಳಲ್ಲಿ ಆರ್ಥಿಕ ವಿಧಾನಗಳು ಅಭಿವೃದ್ಧಿಗೆ ಬರುವಂ[illegible] ಸಹಕಾರ ಪದ್ಧತಿ ಮೊದಲಾದ ವಿಷಯಗಳನ್ನು ಕುರಿ[illegible] ಅವನು ನಗರಗಳಲ್ಲಿ ಕೇಳಿ ತಿಳಿದುಕೊಂಡಿದ್ದನು. ನಗರಗಳ ಜೀವಾಳವೇ ಗ್ರಾಮಗಳಾಗಿರುವಾಗ ಗ್ರಾಮಗಳ ಜನರು ಸುಖವಾಗಿರಬೇಕಾದುದು ಅಗತ್ಯವಲ್ಲವೆ?

ಎ. ಸಿ. ಸರ್ಕಾರ್, ಐಂದ್ರಜಾಲಿಕರು

ನಗರದಲ್ಲಿ ಗಂಗಾಧರನೆಂದು ಗೋಪಾಲನಿಗೊಬ್ಬ ಸ್ನೇಹಿತನಿದ್ದ. ಆ ಸ್ನೇಹಿತನ ಅಣ್ಣ ಇಂದ್ರನೆಂಬವನು ಸಮಾಜದ ಸೇವಕನಾಗಿ ಕೆಲಸ ಮಾಡುವವನು. ಗೋಪಾಲನ ಗ್ರಾಮದ ಹೀನಸ್ಥಿತಿಯನ್ನು ಕೇಳಿ ಅವನು, "ಗೋಪಾಲ್, ನಿನ್ನ ಊರಿನಲ್ಲಿ ಒಂದು ಆರ್ಥಿಕ ಸಹಕಾರ ಸಂಸ್ಥೆಯನ್ನು ಏರ್ಪಡಿಸಿಬಿಟ್ಟರೆ ನಿನ್ನ ಸಮಸ್ಯೆ ತೀರಿಹೋಗುತ್ತದೆ. ಅದಕ್ಕೆ ಪ್ರಾರಂಭದಲ್ಲಿ ಸ್ವಲ್ಪ ಮೂಲಧನ ಬೇಕು" ಎಂದನು.

"ಮೂಲಧನ ಕೊಡಬಲ್ಲ ಸಮರ್ಥರು ಬಡ್ಡಿಯ ವ್ಯವಹಾರ ನಡೆಸಿ ಪ್ರಜೆಗಳನ್ನು ಜಿಗಳೆಗಳ ಹಾಗೆ ಹೀರುವವರೇ. ಸಹಕಾರ ಸಂಸ್ಥೆಯಾಗಿಬಿಟ್ಟರೆ ಅವರ ಆಟ ನಿಂತುಹೋಗುವುದಲ್ಲವೇ? ಅವರು ಹಣ ಕೊಡುವರೇ?" ಎಂದ ಗೋಪಾಲ್.

"ಹಾಗಾದರೆ ನಿನ್ನ ಊರಿನವರಿಗೆ ಏನೋ ಚಿನೆಯೋ ಇಲ್ಲವೆನ್ನಬೇಕು." ಎಂದ ಇಂದ್ರ. "ಒಬ್ಬರಿದ್ದಾರೆ. ಜುಗಲ್ ಪ್ರಸಾದ್ ಅಂತ. ಅವರನ್ನು ಕದಲಿಸುವುದೇ ಕಷ್ಟ; ಕದಲಿಸಲು ನಮ್ಮಿಂದಾದರೆ ಕೆಲಸ ನಡೆಯುತ್ತದೆ. ಅವರು ಬಡ್ಡೀ ವ್ಯವಹಾರದ ಕೆಲಸ ಕೂಡ ಮಾಡುವುದಿಲ್ಲ. ಆದರೇನು? ಪರಮ ಲೋಭಿ. ಅವರಿಂದ ಒಂದೇ ಒಂದು ಪೈಸೆಕೂಡಾ ಎಳೆದುಕೊಳ್ಳಲು ಸಾಧ್ಯವಿಲ್ಲ." ಎಂದ ಗೋಪಾಲ್.

ಅದುವರೆಗೂ ಅವರ ಮಾತುಗಳನ್ನು ಕೇಳುತ್ತಿದ್ದ ಗಂಗಾಧರನು, "ನಿಮ್ಮ ಜುಗಲ್ ಪ್ರಸಾದ್ ಮಹಾನು ...ಾವರು ದೇವರ ಭಕ್ತಿ ವಿಶ್ವಾಸಗಳಿದ್ದವರೇನಾ?" ...ದು ಕೇಳಿದ.

"ಆ ಹಳ್ಳಿ ಮೂಲೆಯಲ್ಲಿ ಮೂಢ ವಿಶ್ವಾಸಗಳಿಗೆ ಕಡಿಮೆಯೆ?" ಎಂದ ಇಂದ್ರ. "ಅಷ್ಟಿದ್ದರೆ ಸಾಕು. ನನಗೆ ತಿಳಿದ ಅಲ್ಪಸ್ವಲ್ಪ ಇಂದ್ರಜಾಲದಿಂದ ಅವರನ್ನು ಕದಲಿಸಿಬಿಡಬಹುದು. ಅವರನ್ನು ಒಂದುಸಾರಿ ನೋಡೋಣ." ಎಂದ ಗಂಗಾಧರ.



ಅನಂತರ ಒಂದು ದಿನ ಗೋಪಾಲನೂ, ಇಂದ್ರನೂ, ಗಂಗಾಧರನೂ ಸೈಕಲ್ಲಿನಲ್ಲಿ ಹೊರಟರು. ಕತ್ತಲೆಯಾಗುವ ಹೊತ್ತಿಗೆ ಸತೀಪುರವನ್ನು ತಲಪಿ ರಾತ್ರಿಯಲ್ಲಿ ಅವರೆಲ್ಲ ಗೋಪಾಲನ ಮನೆಯಲ್ಲೇ ...ದರು.

ಮರುದಿನ ಬೆಳಿಗ್ಗೆ ಇಂದ್ರನು ಸಿದ್ಧಾಯ...
ವೇಷ ಹಾಕಿಕೊಂಡು ನಟಿಸುತ್ತ ಗ್ರಾಮಸ್ಥ ಹ...
ಸಾಮುದ್ರಿಕ ಹೇಳತೊಡಗಿದನು. ...ಯಲ್ಲಿ
ಅವನಿಗೆ ಸ್ವಲ್ಪ ಪ್ರವೇಶವೂ ಇದ್ದುದ...
ಗ್ರಾಮಸ್ಥರು ಅವನು ಹೇಳುವ ವಿ...
ಆಶ್ಚರ್ಯಪಟ್ಟರು. ಈ ಹೊಸ ಸಿದ...
ಸಾಮುದ್ರಿಕದ ಪ್ರಭಾವ ಜುಗಲ್ ಪ...
ಬೀಳಿಸುವ ಕೆಲಸವನ್ನು ಗೋಪಾಲ...
ಪುಕ್ಕಟೆ ಜ್ಯೋತಿಷ್ಯ ಎಂಬ ಸಂಗತಿ...
ಜುಗಲ್ ಪ್ರಸಾದ್ ಓಡುತ್ತಾ...
ಅಂಗೈಯನ್ನು ಸಿದ್ಧಾಂತಿಯ ಮುಂ...
ಮತೆ ಕೇಳಿಕೊಂಡನು.



ಸಿದಾತಿ ಅವನ ಕೈಯನ್ನು ಒಮ್ಮೆ ಮಾತ್ರ ಕಣ್ಣಾಡಿಸಿ ನೋಡಿ, "ನಿಮ್ಮ ಹಸ್ತರೇಖೆಯ ಅರ್ಥವನ್ನು ? ಹೇಳುವಂತಿಲ್ಲ. ನಿಮ್ಮ ಮನೆಯಲ್ಲಿ ನಿಮಗೊರಿಗೆ ತಿಳಿಯುವಂತೆ ಹೇಳಬೇಕಾದುದು" ಎಂದನು ಹಾಗೆಯೇ ಆಗಲೆಂದು ಸಿದ್ಧಾಂತಿಯನ್ನು ತನ್ನ ಮ ಆಮಂತ್ರಿಸಿದ ಜುಗಲ್ ಪ್ರಸಾದ್.

ಗೋ... ಇದಕ್ಕೆ ಮೊದಲೇ ಒಮ್ಮೆ ತನ್ನ
ಜುಗಲ್ ಗ್ರಾಮ... ವು ವಸ್ತುಗಳನ್ನು ಸಿದ್ಧಮಾಡಿ
ಕುಳ. ದೇ... ಇರಿಸಿ ಸಾಯಂಕಾಲ ಗೋಪಾಲನೂ,
ಇರಲಿಲ್ಲ. ಅಂ...ದು ರನೂ ಜುಗಲ್ ಪ್ರಸಾದನ
ವನ್ನು ಸೇರಿಸಿ ಪ್ರಸಾ... ನೆ
ಲವಿಲಿ ಒದ್ದಾ... ಇಂದ್ರ ಪ್ರಸಾದನ ಹಸ್ತರೇಖೆಗಳನ್ನು
ಆದೇ ಗ್ರಾ... ನೋಡು... ದ ಅದೃಷ್ಟವೆಂದರೆ ನಿಮ್ಮದೇ.
ರು ಜುಗಲ್ ...ನು ಲಕ್ಷ್ಮೀದೇವಿಯು ಗುಣವೇ
ಾ ಬಡ ... ರನ್ನೇ ಆಶ್ರಯಿಸಿಕೊಂಡಿರು
...ಲೆಯೇ ಶ್ರಮಪಡುವ ಬಡಜನರ

ಮೇಲೆ ಕನಿಕರಿಸಲಾರಳು. ಈ ದಿನವೇ ನಿಮಗೊಂದು ಚಿಕ್ಕ ನಿಧಿ ದೊರಕಲಿದೆಯೆಂದರೆ ನಿಮ್ಮ ಅದೃಷ್ಟಕ್ಕೆ ಸಾಟಿ ಇದೆಯೆ ?" ಎಂದನು.

ಈ ಮಾತು ಕೇಳಿದ ಕೂಡಲೇ ಜುಗಲ್ ಪ್ರಸಾದನ ಕಣ್ಣುಗಳು ಆಶೆಯಿಂದ ಪ್ರಕಾಶಿಸಿದುವು. ಇಂದ್ರನು ಅವನ ರೇಖೆಗಳನ್ನು ಇನ್ನಿಷ್ಟು ಪರಿಶೀಲನೆಯಿಂದ ನೋಡುತ್ತ "ನಿಮ್ಮ ತೋಟದ ಆವರಣದ ಆಗ್ನೇಯ ಮೂಲೆಯಲ್ಲಿ ಮಾವಿನಮರವಿದೆಯೇನು ? ಅದರ ಬದಿಯಲ್ಲಿ ತನ್ನಂತಾನೇ ಹುಟ್ಟಿದ ಬದನೇಗಿಡವೊಂದಿರಬೇಕು. ಅದರ ಬುಡದಲ್ಲಿ ಅಚ್ಚ ಬೆಳ್ಳಿ ರೂಪಾಯಿಗಳ ಒಂದು ನಿಧಿಯಿದೆ. ಮೊದಲು ಅದನ್ನು ಅಗೆದು ತೆಗೆದುಕೊಳ್ಳಿ. ನೀವೇ ಸ್ವತಹಾ ಹೋಗಿ ಅಗೆಯಬೇಕು" ಎಂದನು.

ಆಶೆ ಕುತೂಹಲಗಳಿಂದ ಜುಗಲ್ ಪ್ರಸಾದನು ಲಾಂದರವನ್ನೂ ಗುದ್ದಲಿಯನ್ನೂ ತೆಗೆದುಕೊಂಡು ಒಬ್ಬನೇ ತೋಟದ ಆಗ್ನೇಯ ದಿಕ್ಕಿಗೆ ಹೊರಟನು.

ಅವನು ಹಿಂದಿರುಗಿ ಬರುವುದರೊಳಗೆ ಗಂಗಾಧರನು ಒಂದು ಗಾಜಿನ ಲೋಟ ತೆಗೆದು ಕೋಣೆಯ ಒಂದು ಮೂಲೆಯಲ್ಲಿದ್ದ ಎತ್ತರವಾದ ಪೀಠದ ಮೇಲೆ ಅದನ್ನಿಟ್ಟು ಏನೋ ಇಂದ್ರಜಾಲ ಮಾಡಲು ಸಿದ್ಧನಾದನು.

ಸುಮಾರು ಅರ್ಧ ಗಂಟೆಯಲ್ಲಿ ಜುಗಲ್ ಪ್ರಸಾದ್ ಪುಟ್ಟ ತಂಬಿಗೆಯೊಂದಿಗೆ ಹಿಂದಿರುಗಿ ಬಂದನು. ಅದನ್ನು ಅವನು ಇಂದ್ರನ ಮುಂದೆ ಇಟ್ಟು ವಿನಯದಿಂದ "ನೀವೇ ತೆರೆದುನೋಡಿ" ಎಂದನು. ಇಂದ್ರನು ಜಾಗರೂಕತೆಯಿಂದ ಅದರ ಮುಚ್ಚಳವನ್ನು ಎತ್ತಿ ತಂಬಿಗೆಯನ್ನು ನೆಲದ ಮೇಲೆ ಕೌಚಿ ಹಾಕಿದನು. ಅದರೊಳಗೆ ಕಿಲುಬುಹಿಡಿದ ವಿಕ್ಟೋರಿಯಾ ರಾಣಿಯ ಮುದ್ರೆಯುಳ್ಳ ಐವತ್ತು ರೂಪಾಯಿಗಳಿದ್ದುವು. ಜುಗಲ್ ಪ್ರಸಾದನ ಕಣ್ಣು ಆತ್ಮಾನಂದದಿಂದ ಅರಳಿದುವು. ಅವನು ಭಕ್ತಿಗದ್ಗದ ಸ್ವರದಿಂದ

"ಅಯ್ಯಾ, ಸಿದ್ಧಾಂತಿಗಳೇ, ನಿಮ್ಮ ಶಕ್ತಿ ಅದ್ಭುತ! ಎಲ್ಲಿಯೂ ನೋಡಲಿಲ್ಲ!" ಎಂದನು.

ಆ ರೂಪಾಯಿಗಳನ್ನು ಗೋಪಾಲನು ತನ್ನ ದೊಡ್ಡಪ್ಪನನ್ನು ಕೇಳಿ ತೆಗೆದುಕೊಂಡು ರಸಾಯನಗಳ ಸಹಾಯದಿಂದ ಅವುಗಳಿಗೆ ಕಿಲುಬು ಹಿಡಿಸಿದ್ದನು. ಅವುಗಳನ್ನು ಪುಟ್ಟ ತಂಬಿಗೆಯಲ್ಲಿ ಹಾಕಿ, ಮುಚ್ಚಳ ಮುಚ್ಚಿ ಅಂಟಿಸಿ ಮುದ್ರೆಮಾಡಿ, ಎರಡು ವಾರಗಳ ಹಿಂದೆ ಊರಿಗೆ ಬಂದಾಗ ಅದನ್ನು ಜುಗಲ್‌ಪ್ರಸಾದನ ಆವರಣದೊಳಗೆ ಗುಟ್ಟಾಗಿ ಹುಗಿದಿಟ್ಟಿದ್ದನು.

ಇಂದ್ರನು ಜುಗಲ್‌ಪ್ರಸಾದನ ಬಲಗೈಯನ್ನು ತೆಗೆದುಕೊಂಡು ಮತ್ತೆ ಪರೀಕ್ಷೆ ಮಾಡುತ್ತ, "ಇನ್ನೊಂದು ಸಂಗತಿಯನ್ನು ಕೂಡಾ ನಿಮಗೆ ಹೇಳಲೇ ಬೇಕಾಗಿದೆ. ನೀವು ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟಿರುವ ಧನವೆಲ್ಲವೂ ಅವಮಾನದಿಂದ ನಡುಗುತ್ತಾ ಇವೆ. ಅದೃಷ್ಟದಿಂದ ನಿಮ್ಮಲ್ಲಿ ಸೇರುವ ಧನಕ್ಕೆ ಬಂದೀಖಾನೆಯೇ ಗತಿಯಾಗುವುದನ್ನು ಅವು ಸಹಿಸುವುದಿಲ್ಲ. ಅವೆಲ್ಲ ನಿರ್ಬಂಧದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾ ಇವೆ. ನೀವು ಕೂಡಲೇ ತಕ್ಕ ಜಾಗರೂಕತೆ ತೆಗೆದುಕೊಳ್ಳದಿದ್ದರೆ ಅವು ಪೆಟ್ಟಿಗೆಯಿಂದ ತಪ್ಪಿಸಿಕೊಂಡು ಮಾಯವಾಗಿ ಹೋಗಿಬಿಡುತ್ತವೆ" ಎಂದನು.

ಜುಗಲ್‌ಪ್ರಸಾದ್ ಈ ಮಾತನ್ನು ನಂಬಲಾಗದವನಂತೆ ಇಂದ್ರನ ಮುಖವನ್ನು ನೋಡಿದನು. "ಹೌದು. ನೀವು ನನ್ನ ಮಾತನ್ನು ನಂಬುವುದಿಲ್ಲ. ಹಾಗಾದರೆ ಒಂದು ಕೆಲಸ ಮಾಡಿರಿ. ನೀವು ನಿಮ್ಮ ಕಬ್ಬಿಣದ ಪೆಟ್ಟಿಗೆಯಿಂದ ಒಂದು ನಾಣ್ಯವನ್ನು ತಂದು ಆ ಮನುಷ್ಯನ ಕೈಗೆ ಕೊಡಿ" ಎಂದು ಗಂಗಾಧರನನ್ನು ತೋರಿಸಿದನು.

ಜುಗಲ್‌ಪ್ರಸಾದ್ ಎದ್ದುಹೋಗಿ ಕಬ್ಬಿಣದ ತಿಜೋರಿಯಿಂದ ಒಂದು ರೂಪಾಯಿಯನ್ನು ತಂದು ಗಂಗಾಧರನಿಗೆ ಕೊಟ್ಟನು. ಇಂದ್ರನು ಸೈಗೆಯಿಂದ ತೋರಿಸಿದಂತೆ ಗಂಗಾಧರನು ಅದನ್ನು ಎತ್ತಿ ಪೀಠದ ಮೇಲಿದ್ದ ಗಾಜಿನ ಲೋಟೆಯಲ್ಲಿ ಹಾಕಿದನು. "ಈಗ ನಿಮ್ಮ ಧನದ ವೈಖರಿಯನ್ನು ನೀವೇ ಸ್ವಲ್ಪ



ನೋಡಿರಿ; ಒಂದೊಂದು ನಾಣ್ಯಕ್ಕೂ ಇರುವ ಶಕ್ತಿಯನ್ನು ಪ್ರತ್ಯಕ್ಷ ನೋಡಿರಿ!" ಎಂದ ಇಂದ್ರ.

ಮರುಕ್ಷಣದಲ್ಲಿ ರೂಪಾಯಿ ಕದಲತೊಡಗಿ ಲೋಟೆಯಿಂದ ಹೊರಗೆ ಹೋಗುವ ಪ್ರಯತ್ನ ಮಾಡತೊಡಗಿತು. ಅದು ಸ್ವಲ್ಪ ಎತ್ತರಕ್ಕೆ ಎದ್ದು ಮತ್ತೆ ಬಿದ್ದುಹೋಯಿತು. ಆಮೇಲೆ ಅದು ಗ್ಲಾಸಿನಲ್ಲಿ ಹಾರತೊಡಗಿತು.

ಜುಗಲ್‌ಪ್ರಸಾದ್ ಬಾಯಿತೆರೆದು ಕಣ್ಣುಗಳನ್ನು ಅಗಲಿಸಿಕೊಂಡು ನೋಡುತ್ತಿದ್ದನು. ಸ್ವಲ್ಪಹೊತ್ತಿಗೆ ಅವನು ತನ್ನ ಆಲೋಚನೆಗಳನ್ನು ಕಲೆಹಾಕಿಕೊಂಡು, "ಅಯ್ಯಯ್ಯೋ! ನನ್ನ ಧನ ಓಡಿಹೋಗದಂತೆ ಮಾಡಬೇಕು. ಇದಕ್ಕೇನಾದರೂ ದಾರಿಯಿದೆಯೆ? ಪರಿಹಾರವಿದೆಯೆ?" ಎಂದು ಕೇಳಿದ.

"ಹಣದ ಗುಣವು ಚಲಾವಣೆಯೇ ಹೊರತು ಸುಮ್ಮನೆ ಬಿದ್ದಿರುವುದಲ್ಲ. ನೀವು ನಿಮ್ಮೂರ ಬಡ ರೈತರಿಗೆ ಸಹಾಯಮಾಡಿರಿ. ನಿಮಗೂ ಒಳಿತು, ಜನರಿಗೂ ಒಳಿತು, ಧನಕ್ಕೂ ಒಳಿತು" ಎಂದ ಇಂದ್ರ.

"ನಾನು ಬಡ್ಡಿಗೆ ಹಣಕೊಟ್ಟು ಎಳೆದುಕೊಳ್ಳುವವನಲ್ಲ. ಮತ್ತೆ ಯಾವ ರೀತಿಯಲ್ಲಿ ಸಹಾಯ ಮಾಡಲಿ?" ಎಂದ ಜುಗಲ್‌ಪ್ರಸಾದ್.

"ಒಂದು ಕೆಲಸ ಮಾಡಿರಿ. ಈ ಗೋಪಾಲ್ ನಿಮ್ಮ ಊರಿನ ಹುಡುಗ ತಾನೇ? ನಿಮ್ಮ ನಂಬುಗೆಗೂ ಪಾತ್ರನಾದವನು ಊರ ರೈತರಿಗೆ ಹೇಗೆ ಸಹಾಯ ಮಾಡಬಹುದೆಂದು ಅವನನ್ನು ಕೇಳಿರಿ. ಲೆಕ್ಕ ನಿಮ್ಮ ಅಳವಿನೊಳಗಿನಿಂದ ಹೋಗದಂತೆ, ನಿಮ್ಮ ಧನವೂ ಅಭಿವೃದ್ಧಿಯಾಗಿರುವಂತೆ ಅವನು ತಕ್ಕ ಪಥಕವನ್ನು ಹಾಕಬಲ್ಲನು; ಅವನ ರೇಖೆ ನೋಡಿದ್ದೇನೆ. ಪ್ರಾಮಾಣಿಕ ಹುಡುಗ" ಎಂದ ಇಂದ್ರ.

ಅನಂತರ ಗೋಪಾಲನ ಆಲೋಚನೆಯ ಪ್ರಕಾರ ಸತೀಪುರದಲ್ಲಿ ಒಂದು ಸಹಕಾರನಿಧಿ ಏರ್ಪಟ್ಟಿತು. ಕಡಿಮೆ ಬಡ್ಡಿಯ ಮೇಲೆ ರೈತರು ಅಗತ್ಯಬಿದ್ದಾಗಲೆಲ್ಲ ಆ ನಿಧಿಯಿಂದ ಹಣವನ್ನು ಪಡೆಯತೊಡಗಿದರು. ಊರಿಗೆ ಲಾಭವಾಗಿ, ಅನ್ಯಾಯದ ಬಡ್ಡೀ ವ್ಯಾಪಾರದವರಿಗೆ ನಷ್ಟವಾಯಿತು.

ಗಾಜಿನ ಲೋಟೆಯಲ್ಲಿ ರೂಪಾಯಿಯನ್ನು ಹೇಗೆ ಆಡಿಸಲಾಯಿತೆಂದರೆ, ಗಂಗಾಧರನ ಹತ್ತಿರ ಸಪೂರವಾಗಿಯೂ ಬಲವಾಗಿಯೂ ಇರುವ ಕಪ್ಪು ಬಣ್ಣದ ನೂಲು ಇದ್ದಿತು. ಅದರ ಕೊನೆಗೆ ಮಯಣವನ್ನು ಅಂಟಿಸಲಾಗಿತ್ತು. ಗಂಗಾಧರನು ರೂಪಾಯಿಯನ್ನು ಲೋಟೆಯಲ್ಲಿ ಹಾಕುವಾಗ ರೂಪಾಯಿಗೆ ಆ ಮಯಣವನ್ನು ಹಚ್ಚಿದ್ದನು. ನೂಲಿನ ಎರಡನೇ ಕೊನೆ, ಗೋಪಾಲನ ಕೈಯಲ್ಲಿತ್ತು. ಕತ್ತಲೆಯಲ್ಲಿ ಹತ್ತಿರದಿಂದ ನೋಡಿದರೂ ನೂಲು ಕಾಣಿಸಲಾರದು. ನೂಲಿನಿಂದ ಆ ರೂಪಾಯಿಯನ್ನು ಆಡಿಸಿದವನು ಗೋಪಾಲನೇ.



# ಶತ್ರುಶೇಷ

**ಒಂ**ದು ಊರಿನಲ್ಲಿ ರಾಮಪ್ಪ ರಂಗಪ್ಪ ಎಂಬವರು ನೆರೆಹೊರೆಯವರಾಗಿದ್ದರು. ಅವರ ನಡುವೆ ಬಹಳ ಕಾಲದಿಂದ ಬದ್ಧವೈರವಿದ್ದಿತು.

"ಶತ್ರುತ್ವವು ಅಗ್ನಿಯಂತಹುದು. ಋಣಶೇಷಗಳನ್ನು ಉಳಿಸಬಾರದು." ಎಂಬ ಮಾತು ಇಬ್ಬರಿಗೂ ಗೊತ್ತಿರುವುದರಿಂದ ಇಬ್ಬರಿಗೂ ಒಬ್ಬರನ್ನೊಬ್ಬರು ನಿರ್ಮೂಲಿಸಬೇಕೆಂದಿತ್ತು.

ಒಂದು ದಿನ ರಾಮಪ್ಪನ ಎರಡು ಮೇಕೆಗಳು ಹಗ್ಗ ಕಡಿದುಕೊಂಡು ರಂಗಪ್ಪನ ತೋಟದೊಳಗೆ ಹೊಕ್ಕು ತರಕಾರಿ ಗಿಡಗಳನ್ನೂ ಹೂವಿನ ಸಸಿಗಳನ್ನೂ ತಿಂದುಬಿಟ್ಟವು. ರಂಗಪ್ಪ ಮಹಾಕೋಪದಿಂದ ಉರಿದುಬಿದ್ದು ಆ ಎರಡು ಮೇಕೆಗಳನ್ನೂ ಕಡಿದು ಕೊಂದು ಅವುಗಳ ಕಳೇಬರಗಳನ್ನು ರಾಮಪ್ಪನ ತೋಟದೊಳಗೆ ಬಿಸುಟನು.

ಸ್ವಲ್ಪ ಹೊತ್ತಿನ ಮೇಲೆ ರಾಮಪ್ಪ ಗುದ್ದಲಿ ಹಿಡಿದುಕೊಂಡು ರಂಗಪ್ಪನ ಮನೆಗೆ ಬಂದನು. ಅದನ್ನು ನೋಡಿ ರಂಗಪ್ಪ ಭಾರಿದೊಣ್ಣೆ ಹಿಡಿದುಕೊಂಡು ಯುದ್ಧಕ್ಕೆ ತಯಾರಾದನು.

ಆಗ ರಾಮಪ್ಪ ಶಾಂತತೆಯಿಂದ, "ಕ್ಷಮಿಸು ರಂಗಪ್ಪಾ, ನನ್ನ ಅಶ್ರದ್ಧೆಯಿಂದಲೇ ನನ್ನ ಮೇಕೆಗಳು ನಿನ್ನ ತೋಟವನ್ನು ಹಾಳು ಮಾಡಿದುವು. ಮತ್ತೆ ನಾನೇ ಓಳಿ ತೆಗೆದು ಗಿಡಗಳನ್ನೆಲ್ಲ ಮೊದಲಿನ ಹಾಗೇ ನೆಟ್ಟುಕೊಟ್ಟು ಬಿಡುತ್ತೇನೆ" ಎಂದನು.

ಅದನ್ನು ಕೇಳಿ ರಂಗಪ್ಪನಿಗೆ ತುಂಬ ನಾಚಿಕೆಯಾಗಿ ಹೋಯಿತು.

"ತಪ್ಪು ನನ್ನದು ರಾಮಪ್ಪಾ, ಕೋಪದಿಂದ ಹುಚ್ಚನಾಗಿ ಬಾಯಿಯಿಲ್ಲದ ಪ್ರಾಣಿಗಳನ್ನು ಕೊಂದೆ. ಪುನಃ ಹುಟ್ಟಿಸಲಾರೆನಲ್ಲ! ಕ್ಷಮಿಸು" ಎಂದ ರಂಗಪ್ಪ.

ಅಂದಿನಿಂದ ಶತ್ರುಶೇಷವಿಲ್ಲದೆ ಹೋಯಿತು.





# ಕಳಾಭಿಮಾನ

**ಒಂ**ದು ಊರಿನಲ್ಲಿ ಭೀಮನಾಯಕರೆಂಬ ಜಮೀನುದಾರರಿದ್ದರು. ಅವರ ಮನೆಯ ವಠಾರದೊಳಗಿನ ಗುಡಿಸಲಿನಲ್ಲಿ ಕಾಳನೆಂಬ ಕೆಲಸದ ಯುವಕನು ವಾಸಮಾಡಿಕೊಂಡಿದ್ದನು. ಭೀಮನಾಯಕರ ಮನೆಯ ಎಲ್ಲಾ ಕೆಲಸಗಳಿಗೂ ಅವನು ಬರುತ್ತಿದ್ದನು. ಕಾಳನಿಗೆ ಒಳ್ಳೆಯ ಕಂಠವಿದ್ದಿತು. ಅವನು ಹಾಡುತ್ತ ಲೀಲಾಜಾಲವಾಗಿ ಕೆಲಸ ಮಾಡುವನು.

ಭೀಮನಾಯಕರ ಪತ್ನಿ ಒಂದುದಿನ ಕಾಳನಿಗೆ ಊಟ ಬಡಿಸುತ್ತಾ, "ಎಷ್ಟು ದಿನ ಹೀಗೆ ಒಬ್ಬನೇ ಇರುವೆಯೋ ಕಾಳಾ? ಒಳ್ಳೇ ಹುಡುಗೀನ ನೋಡಿ ಮದುವೇ ಮಾಡಿಕೊ" ಎಂದು ಹೇಳಿದಳು.

ಇತ್ತೀಚೆಗೆ ಕಾಳನಿಗೂ ಮದುವೆಯಾಗಬೇಕೆಂಬ ಆಲೋಚನೆ ಬಂದಿತ್ತು. ಆದರೆ ಮದುವೆಯ ಪ್ರಯತ್ನಕ್ಕೆ ಅವನಿಗೆ ಬಿಡುವೇ ಇರಲಿಲ್ಲ. ಆದುದರಿಂದ ಅವನು ಒಡತಿಯೊಂದಿಗೆ, "ಆದಕ್ಕೆ ಒಡೆಯರ ಹತ್ತಿರ ಹೇಳಿ ಒಂದು ವಾರ ರಜೆಕೊಡಿಸಿದರೆ, ಮದುವೆ ಮಾಡಿಕೊಂಡು ಬರುತ್ತೇನೆ" ಎಂದನು.

ಭೀಮನಾಯಕರು ಅವನಿಗೆ ರಜೆ ಕೊಟ್ಟರು. ಕಾಳನು ನಾಲ್ಕಾರು ಗ್ರಾಮಗಳಲ್ಲಿ ತಿರುಗಿ, ತನಗೆ ಹಿಡಿಸಿದ ಒಬ್ಬಳು ಸುಂದರ ಹುಡುಗಿಯನ್ನು ನೋಡಿ ಮದುವೆ ಮಾಡಿಕೊಂಡು ಕರೆದುಕೊಂಡು ಬಂದನು. ಆ ಹುಡುಗಿಯ ಹೆಸರು ಚಂದ್ರಕಳೆಯಾದರೂ "ಕಳಾ" ಎಂದೇ ಕರೆಯುವರು.

ಕಳಾಳಿಗೆ ಪಾಂಡಿತ್ಯವೇನಿಲ್ಲದಿದ್ದರೂ ಜಾನಪದದ ರೀತಿಯಲ್ಲಿ ತುಂಬಾ ಹಾಡು ಕಲಿತಿದ್ದಳು. ಚಿಕ್ಕಂದಿನಿಂದಲೇ ಅವಳಿಗೆ ಹಾಡಿನ ಹುಚ್ಚಂತೆ. ಸ್ವಲ್ಪ ಮಟ್ಟಿಗೆ ಅಕ್ಷರಜ್ಞಾನವಿರುವ ಅವಳು ಹೊಸ ಪದಗಳನ್ನು ಕಟ್ಟಿ ಬರೆಯುವ ಅಭ್ಯಾಸವನ್ನು ಮಾಡಿಕೊಂಡಿದ್ದಳು. ಬಿಸಿಲುಕಾದರೆ, ಮಳೆ ಸುರಿದರೆ, ಮೇಘಗಳು ಗುಡುಗಿದರೆ, ಮಿಂಚಿದರೆ, ಮದುವೆ, ಹಬ್ಬ ಹಾಡಿ ಮೊದಲಾದ ವಿಶೇಷಗಳು ಬಂದರೆ ಕಳಾ ಹಾಡುವಳು. ಹೊಸ ಹಾಡುಗಳನ್ನು ಬರೆಯುವಳು. ಅವಳ ಹಾಡುಗಳು ಕೇಳಲು ಇಂಪಾಗಿ ಸೂಕ್ಷ್ಮ ಭಾವನೆಗಳನ್ನು ತುಂಬಿರುತ್ತಿದ್ದುವು.

ಭೀಮ ನಾಯಕರ ಹೆಂಡತಿಗೆ ಕಳಾ ತುಂಬ ಹಿಡಿಸಿದಳು. ಕಳಾ ಬರೆದ ಹೊಸ ಹಾಡುಗಳನ್ನು ಕೇಳುವುದೆಂದರೆ ಅವಳಿಗೆ ಬಹಳ ಇಷ್ಟ. ಕಳಾ ಕೂಡಾ ತಾನು ಯಾವ ಹಾಡು ಬರೆದರೂ, ಮೊದಲು ಒಡತಿಯ

ಎಂ. ಕೆ. ಈಶ್ವರರಾವ್

ಮುಂದೆ ಹಾಡಿ ತೋರಿಸುವಳು. ಕಳಾ ಬಲು ಚೆನ್ನಾಗಿ ಹಾಡುವಳೆಂದು ಆವಳೇ ಪ್ರಚಾರ ಮಾಡ ತೊಡಗಿದಳು. ಅಂತೆಯೇ ಕಳಾಳನ್ನು ಹಾಡಲು ಅನೇಕರು ಕರೆಯುತ್ತಿದ್ದರು.

ಇದನ್ನು ನೋಡಿ ಕಾಳನ ಸ್ನೇಹಿತನೊಬ್ಬ ಅಸೂಯೆಯಿಂದ ಸಂಕಟಪಡತೊಡಗಿದ. ಕಾರಣ ವೇನೆಂದರೆ ಅವನ ಹೆಂಡತಿಯನ್ನು ಕುರಿತು ಮಾತಾಡುವವರಿರಲಿಲ್ಲ.

ಅವನು ಸಂಕಟ ತಾಳಲಾರದೆ ಒಂದು ದಿನ, ಕಾಳ ನೊಂದಿಗೆ, "ನಿನ್ನ ಹೆಂಡತಿ ಹಾಡೂ ಪದಾ ಎಲ್ಲಾ ಬರೆಯುತ್ತಾಳಂತಲ್ಲಾ ? ನಿನ್ನನ್ನು ಸೀಳಿದರೂ ಒಂದಕ್ಷರ ಕಾಣದಿರುವಾಗ, ನಿನ್ನ ಹೆಂಡತಿ ಅಷ್ಟೊಂದು ಚಾಲಾಕಿನವಳಾಗಿ ಊರು ಸುತ್ತುತ್ತಾ, ಸಿಕ್ಕಸಿಕ್ಕಲ್ಲಿ ಹಾಡಿಕೊಂಡಿದ್ದರೆ, ಕಡೆಗೆ ಅವಳು ನಿನ್ನನ್ನು ಮನುಷ್ಯ ನೆಂದು ಕೂಡಾ ನೋಡಲಿಕ್ಕಿಲ್ಲ. ಕಸಮುಸುರೆ ಮಾಡಿ ಕೊಂಡಿರಬೇಕಾದವಳು ಬರೆಯುತ್ತಾ ಹಾಡುತ್ತ ಹತ್ತು ಮಂದಿಗಳ ಕಣ್ಣು ಕಿವಿ ಎಳೆಯುವುದು ಏನು ಚೆಂದ ? ಅವಳನ್ನು ಸ್ವಲ್ಪ ಹದ್ದಿನಲ್ಲಿಟ್ಟುಕೋಪ್ಪಾ. ಹೀಗೇ ಬಿಟ್ಟರೆ ಕಡೆಗೆ ಅವಳು ನಿನ್ನ ನೆತ್ತಿ ಮೇಲೆ ಹತ್ತುತ್ತಾಳೆ" ಎಂದನು.

ಸ್ನೇಹಿತನು ತನ್ನ ಒಳಿತಿಗಾಗಿಯೇ ಇಷ್ಟೆಲ್ಲಾ ಬುದ್ಧಿ ಹೇಳುವನೆಂದು ಕಾಳನಿಗೆ ತೋರಿತು. ಅವನು ಹೇಳುವುದೆಲ್ಲ ನಿಜವೆಂದೂ ಅವನಿಗೆ ಭಾಸವಾಯಿತು. ಅವನು ಮನೆಗೆ ಬಂದಾಗ ಕಳಾ ಕಾಕತಾಳೀಯವಾಗಿ ಯಾವುದೋ ಹೊಸ ಹಾಡು ಬರೆಯುತ್ತಾ ಇದ್ದಳು.

"ಯಾವಾಗ ನೋಡಿದರೂ ಹುಚ್ಚು ಹಾಡು ಬರೆಯುವುದೇ ನಿನ್ನ ಕೆಲಸವಾಯಿತು. ನಾನು ಹೊ...ನ ಕೆಲಸ ಮಾಡಿಬರುವಷ್ಟರಲ್ಲಿ ಒಡೆಯರ ಎಮ್ಮೆ ಹಿಂಡಬಾರದೇ ? ಸಗಣಿ ಬಾಚಿ ಬೆರಣಿ ತಟ್ಟಬಾರದೇ ? ನಾವೇನೂ ಬರೆಯುತ್ತಾ ಕೂಡುವ ದೊರೆಗಳೇ ? ಕೈ ಕಾಲಾಡಿದ ಹೊರತು ಕೂಳು



ಸಿಕ್ಕದ ಸ್ಥಿತಿ ನಮ್ಮದು. ಹಾಡು ಬರೆವಣಿಗೇ ಎಲ್ಲಾ ಸಾಕುಮಾಡಿ ಕೆಲಸ ನೋಡು!" ಎಂದು ಕಾಳ ಹೆಂಡತಿಯನ್ನು ಜರೆದು ಹೇಳಿದನು.

ಕಳಾ ಕೂಡಲೇ ಎದ್ದು ಹೋಗಿ ಎಮ್ಮೆಯನ್ನು ಹಿಂಡಿ ಒಡತಿಗೆ ಕೊಟ್ಟು ಮತ್ತೇನೋ ಕೆಲಸಕ್ಕೆ ಹೋದಳು. ಮರುದಿನ ಬಿಡುವು ವೇಳೆಯನ್ನೆಲ್ಲಾ ಬೆರಣಿ ತಟ್ಟುವುದರಲ್ಲೇ ಕಳೆದಳು. ಅಂತೂ ಅಂದಿ ನಿಂದ ಕಳಾ ಹಾಡುವುದೂ ಬರೆಯುವುದೂ ಎಲ್ಲಾ ನಿಂತಿತು. ದಿನಾ ಏನೋ ಕೆಲಸಮಾಡುತ್ತಾ ಕಾಲ ಕಳೆಯುತ್ತಿದ್ದಳು. ಹೀಗೆಯೇ ಅನೇಕ ದಿನಗಳು ಕಳೆದುವು. ತನ್ನ ಜೀವನದಲ್ಲಿ ಹಾಡು ಕಟ್ಟಿ ಬರೆಯುವ ಯೋಗ ತಪ್ಪಿದುದನ್ನು ನೋಡಿ ಅವಳು ತುಂಬಾ ಸಂಕಟ ಪಡುತ್ತಿದ್ದಳು. ಆದರೆ ಆ ನೋವನ್ನು ಅವಳು ಯಾರೊಂದಿಗೂ ಹೇಳಿಕೊಳ್ಳಲಿಲ್ಲ.

ಒಂದು ದಿನ ಕಾಳನು ತೋಟದಲ್ಲಿ ಗಿಡಮರಗಳಿಗೆ ನೀರು ಬಿಡುತ್ತಾ ಅವನ ಸ್ವಭಾವದಂತೆ ಗಟ್ಟಿಯಾಗಿ

ಹಾಡಿಕೊಂಡಿದ್ದ. ಸಮೀಪದಲ್ಲಿ ಇಬ್ಬರು ಆಳುಗಳನ್ನು ತೆಂಗಿನಮರಕ್ಕೆ ಹತ್ತಿಸಿ ತೆಂಗಿನಕಾಯಿ ಕೀಳಿಸಿಕೊಂಡಿದ್ದ ಭೀಮನಾಯಕರು, ಕಾಳನನ್ನು ನೋಡಿ, "ನಿನ್ನ ಬಾಯಿ ಒಂದು ಕ್ಷಣವೂ ಸುಮ್ಮನಿರಲಾರದೇನೋ? ಏಕೆ ಹೀಗೆ ಕಿವಿಚುಚ್ಚುವ ಹಾಗೆ ರಾಗ ತೆಗೆಯುತ್ತೀ? ಕೆಲಸ ಮಾಡುವಾಗ ನಿನ್ನ ಬಾಯಿ ಮುಚ್ಚಿಕೊಂಡಿರ ಬಾರದೆ? ನಿನ್ನ ಹರಟೆ ಹಾಡಿನ ರೋದನೆ ಕೇಳಿ ಸಾಕಾಯಿತು" ಎಂದು ರೇಗಿಕೊಂಡು ಹೇಳಿದರು.

ಅವರ ಮಾತು ಕಾಳನ ಮನಸ್ಸಿಗೆ ಮುಳ್ಳು ಚುಚ್ಚಿದ ಹಾಗಾಯಿತು. ಅಂದಿನವರೆಗೂ ಅವನ ಹಾಡನ್ನು ಮೆಚ್ಚಿಕೊಂಡಿದ್ದವರು, ಈವರೆಗೂ ಆ ಬಗ್ಗೆ ತನ್ನನ್ನು ದೂರದವರು, ಬೇಸರಪಡದವರು ಈ ದಿನ ಹೀಗೆ ಹೇಳಿದರಲ್ಲ! ಅವನು ಮಾತಾಡದೆ ಸುಮ್ಮನೆ ಬಾಯಿಮುಚ್ಚಿಕೊಂಡು ಕೆಲಸ ಮಾಡ ತೊಡಗಿದನು. ಆದರೆ ಇಷ್ಟು ದಿನ ಉತ್ಸಾಹದಿಂದ ಕೆಲಸ ಮಾಡುತ್ತಿದ್ದ ಹಾಗೆ ಅವನಿಂದ ಮಾಡಲಾಗ ಲಿಲ್ಲ. ಬಾಯಿಮುಚ್ಚಿ ಕೆಲಸ ಮಾಡುವುದು ಬಹಳ ಕಷ್ಟವೆನಿಸಿತು.

ಆಮೇಲೆ ಎರಡುಮೂರು ಸಾರಿ ಕಾಳನು ಕೆಲಸ ಮಾಡುತ್ತ ತನಗೆ ತಿಳಿಯದಂತೆ ಹಾಡಿಬಿಡುವುದೂ, ಭೀಮನಾಯಕರಿಂದ ಬೈಗುಳು ತಿನ್ನುವುದೂ ಆಯಿತು. ಮುಂದೆ ಹೇಗೋ ಅವನು ಹಾಡುವು ದನ್ನು ನಿಲ್ಲಿಸಿದನಾದರೂ ಅವನಲ್ಲಿ ಕೆಲಸ ಮಾಡುವ ಶಕ್ತಿ ತುಂಬ ತಗ್ಗಿಹೋಯಿತು.

ಅದನ್ನು ಗಮನಿಸಿ ಒಂದು ದಿನ ಭೀಮನಾಯಕರು ಅವನನ್ನು ನೋಡಿ, "ಏನೋ ಕಾಳಾ, ನೀನೀಗ ಮೊದಲಿನ ಹಾಗೆ ಕೆಲಸ ಮಾಡುವುದಿಲ್ಲ. ಕೆಲಸ ಬಿಟ್ಟುಹೋಗಿಬಿಡುವ ಆಲೋಚನೆ ಇದೆಯೋ?" ಎಂದು ಕೇಳಿದರು.

"ನಾನು ಹಾಡಬಾರದು ಎಂದಿರಲ್ಲ ಸ್ವಾಮಿ? ಹಾಡದಿದ್ದರೆ ನನಗೆ ಕೆಲಸವೇ ಸಾಗದು. ಮತ್ತೇನು ಮಾಡಲಿ? ನನ್ನ ಲೆಕ್ಕ ತೀರಿಸಿ ಕಳಿಸಿಬಿಡಿ. ಹಾಡುತ್ತಾ ಕೆಲಸಮಾಡುವ ಬೇರೆಲ್ಲಿಯಾದರೂ ಹುಡುಕಿಕೊಳ್ಳುತ್ತೇನೆ" ಎಂದನು.

ಭೀಮನಾಯಕರು ನಕ್ಕು, "ಮತ್ತೆ ನಿನ್ನ ಹೆಂಡತಿ ನಿನ್ನ ಹಾಗಿನವಳು ತಾನೇ! ಅವಳು ಕೆಲಸ ಮಾಡು ವುದಿಲ್ಲವೇ? ಅವಳು ಹಾಡು ಬರೆಯುವುದನ್ನೂ ಹಾಡುವುದನ್ನೂ ಏಕೆ ಕೂಡದೆಂದೆ? ಕಲಾಭಿಮಾನ ವನ್ನು ಹಾಗೆ ಅಡಗಿಸಿಬಿಟ್ಟರೆ ಅವಳೂ ನಿನ್ನ ಹಾಗೇ ಸಂಕಟಪಡುವುದಿಲ್ಲವೇ? ಅವಳ ಸಂಕಟ ತಿಳಿದು ನಿನಗೆ ಸ್ವಲ್ಪ ಬುದ್ಧಿ ಹೇಳಬೇಕೆಂತಲೇ ನಾವು ಹೀಗೆ ಮಾಡಿದ್ದು. ಮತ್ತೇನಿಲ್ಲ. ಹಾಡಿಕೊಂಡೇ ಕೆಲಸ ಮಾಡು. ನಿನ್ನ ಹೆಂಡತಿಯೂ ಮೊದಲಿನ ಹಾಗೇ ಹಾಡುತ್ತಾ ಬರೆಯುತ್ತಾ ಕೆಲಸ ಮಾಡಲಿ" ಎಂದರು.





# ಕಳ್ಳಕಾವಲು

ಊರ ಹೊರಗೆ ಕಾಡಿನ ಸಮೀಪದಲ್ಲಿ ಒಬ್ಬಳು ಮುದುಕಿ ಗುಡಿಸಲು ಕಟ್ಟಿಕೊಂಡು ವಾಸವಾಗಿದ್ದಳು. ಆ ದಾರಿಯಾಗಿ ಪ್ರಯಾಣ ಮಾಡುವವರು, ಆ ಕಾಡಿನ ಹತ್ತಿರ ಬರುವಾಗ ಕತ್ತಲಾದರೆ, ಆ ಮುದುಕಿಯ ಮನೆಯಲ್ಲಿ ತಂಗಿದ್ದು, ಬೆಳಗಾದ ಮೇಲೆ ಮುಂದೆ ಸಾಗಿ ಹೋಗುತ್ತಿದ್ದರು. ರಾತ್ರಿಯಲ್ಲಿ ಯಾರೂ ಕಾಡುದಾರಿಯಲ್ಲಿ ಪ್ರಯಾಣ ಮಾಡುತ್ತಿದ್ದಿಲ್ಲ.

ಕಾರಣವೇನೆಂದರೆ ಅಡವಿಯಲ್ಲಿ ಕಳ್ಳರ ಭಯವಿತ್ತು. ಕಳ್ಳರಿಗೇ ಕಳ್ಳರ ಭಯವಿದ್ದುದರಿಂದ, ಕಳ್ಳರು ಕೂಡಾ ತಾವು ಕದ್ದ ಧನವನ್ನು ತಾತ್ಕಾಲಿಕವಾಗಿ ಆ ಮುದುಕಿಯ ಹತ್ತಿರ ಅಡಗಿಸಿಟ್ಟು ಅದರಲ್ಲಿ ಸ್ವಲ್ಪ ಭಾಗ ಅವಳಿಗೂ ಕೊಡುತ್ತಿದ್ದರು.

ಒಂದು ದಿನ ಸಾಯಂಕಾಲ ಒಬ್ಬ ಕಳ್ಳ ಆ ಮುದುಕಿಯ ಮನೆಗೆ ಬಂದು ಅವಳಿಗೆ ಒಂದು ಮುತ್ತಿನ ಹಾರವನ್ನು ತೆಗೆದು ತೋರಿಸಿ, "ಇದನ್ನು ನಿನ್ನ ಹತ್ತಿರ ಅಡಗಿಸಿಟ್ಟುಕೋ. ಇದು ಒಬ್ಬ ಜಮೀನುದಾರನದು. ಜಮೀನುದಾರನ ಮಗ ಈ ದಿನ ರಾತ್ರಿ ಈ ದಾರಿಯಾಗಿ ಕುದುರೆಯನ್ನೇರಿ ಕೊಂಡು ಬಂದು ರಾತ್ರಿ ನಿನ್ನ ಮನೆಯಲ್ಲೇ ಇರುತ್ತಾನೆ. ಅವನು ಕುದುರೆಯನ್ನು ನಿನ್ನ ಮನೆ ಮುಂದಿರುವ ಮರಕ್ಕೆ ಕಟ್ಟಿ ಹಾಕುತ್ತಾನೆ. ನಾನು ಮಧ್ಯ ರಾತ್ರಿಯ ಹೊತ್ತಿನಲ್ಲಿ ಬಂದು, ಈ ಹಾರವನ್ನು ನಿನ್ನ ಕೈಯಿಂದ ತೆಗೆದುಕೊಂಡು, ಇದರಲ್ಲಿ ಅರ್ಧವನ್ನು ನಿನಗೆ ಕೊಟ್ಟು ಉಳಿದ ಮುತ್ತುಗಳೊಂದಿಗೆ ಆ ಕುದುರೆಯ ಮೇಲೆ ಹೊರಟು ಹೋಗಿಬಿಡುತ್ತೇನೆ. ಜಮೀನುದಾರನ ಮಗ ಬೆಳಗ್ಗೆ ಎದ್ದು ತನ್ನ ಕುದುರೆಯನ್ನು ಯಾರೋ ಕದ್ದುಕೊಂಡು ಹೋದರೆಂದುಕೊಳ್ಳುತ್ತಾನೆ. ನಿನ್ನ ಮೇಲೆ ಅವನಿಗೆ ಯಾವ ಸಂದೇಹವೂ ಬರುವುದಿಲ್ಲ" ಎಂದನು.

ಈ ಏರ್ಪಾಡಿಗೆ ಮುದುಕಿ ಒಪ್ಪಿಕೊಂಡು, ಆ ಕಳ್ಳನ ಇದಿರಿನಲ್ಲಿಯೇ, ನೆಲುವಿನ ಮೇಲಿದ್ದ ಮೂರು ಮಡಕೆಗಳಲ್ಲಿ ಮೇಲಿನದರೊಳಗೆ ಆ ಮುತ್ತಿನ ಹಾರವನ್ನು ಹಾಕಿಟ್ಟಳು. ಕಳ್ಳ ಹೊರಟುಹೋದ.

ಆ ಕಳ್ಳ ಹೇಳಿದಂತೆಯೇ ಕತ್ತಲಾಗುವ ವೇಳೆಯಲ್ಲಿ ಜಮೀನುದಾರನ ಮಗನು ಕುದುರೆಯ ಮೇಲೆ ಬಂದು, ಆ ರಾತ್ರಿ ಮುದುಕಿಯ ಮನೆಯಲ್ಲಿ ಇರುವುದಾಗಿ ಹೇಳಿದ. ಮುದುಕಿ ಸರಿ... ದಾರನ ಮಗ ತನ್ನ ಕುದುರೆ...





ವಿಶ್ವನಾಥರಾವ್

ಮನೆಯ ಮುಂದಿದ್ದ ಮರಕ್ಕೆ ಕಟ್ಟಿಹಾಕಿ ಒಳಗೆ ಬಂದನು. ಆಮೇಲೆ ಮುದುಕಿ, ಜಮೀನುದಾರನ ಮಗ ಗಾಢ ನಿದ್ರೆಯಲ್ಲಿರುವನೆಂದು ದೃಢವಾದ ಮೇಲೆ, ಕಳ್ಳನ ಬರುವಿಕೆಯನ್ನು ನಿರೀಕ್ಷಿಸುತ್ತ, ಕುದುರೆಯನ್ನು ನೋಡುತ್ತ ನಿದ್ದೆ ಮಾಡದೆ ಕಿಟಿಕಿಯ ಹತ್ತಿರವೇ ಕಾವಲು ಕುಳಿತಳು. ಬರುವ ನಿದ್ರೆಯನ್ನು ಬಲು ಕಷ್ಟದಿಂದ ಹತ್ತಿಕ್ಕಿಕೊಳ್ಳುತ್ತಿದ್ದಳು.

ಆದರೆ ಹೇಳಿದಂತೆ ಕಳ್ಳ ಬರಲೇ ಇಲ್ಲ. ಬೆಳಗಾಗಲಿಕ್ಕೂ ಆಯಿತು. ಇನ್ನು ಮೇಲೆ ಕಳ್ಳ ಬರಲಾರನಾದುದರಿಂದ, ಇಡೀ ಮುತ್ತಿನ ಹಾರ ತಾನೇ ಅಪಹರಿಸಿಕೊಳ್ಳಬಹುದೆಂದು ಮುದುಕಿಗೆ ತೋರಿತು. ಇನ್ನು ಕಳ್ಳ ಬಂದು ಕೇಳಿದರೆ ಕೊಟ್ಟಿಲ್ಲವೆಂದು ದಭಾಯಿಸಿದರಾಯಿತು. ಹೀಗೆಂದುಕೊಂಡು ಮುದುಕಿ ನೆಲುವಿನ ಮಡಿಕೆಯೊಳಗೆ ಕೈಹಾಕಿದಳು.

ಆದರಲ್ಲಿ ಹಾರವಿರಲಿಲ್ಲ. ಮುದುಕಿಗೆ ಗಾಬರಿಯಾಯಿತು. ಅವಳು ಏನೂ ತೋರದೆ ಸ್ತಂಭಿಸಿ ನಿಂತುಬಿಟ್ಟಳು.

ಆಗ ಹಿಂದಿನಿಂದ ದೊಡ್ಡ ನಗುವೊಂದು ಕೇಳಿಸಿತು. ಬೆಚ್ಚಿಬಿದ್ದು ಹಿಂದಿರುಗಿ ನೋಡಿದಳು. ಅಲ್ಲಿ ಜಮೀನುದಾರನ ಮಗನು ನಿಂತು ನಗುತ್ತಿದ್ದಾನೆ. ಮುತ್ತಿನ ಹಾರ ಅವನ ಕೈಯಲ್ಲಿತ್ತು. ಮುದುಕಿಗಾದ ಆಶ್ಚರ್ಯಕ್ಕೆ ಮೇರೆಯಿಲ್ಲ.

"ಮುದುಕಮ್ಮಾ, ಈ ಹಾರ ನಮ್ಮ ವಂಶ ಬಹಳ ಕಾಲದಿಂದ ಇದ್ದು ಬಂದಿದೆ. ಇಂತಹ ಮು ಗಳು ಈಗ ಎಲ್ಲಿಯೂ ಸಿಗುವುದಿಲ್ಲ. ಇವುಗ ಬೆಲೆಯೂ ತುಂಬ ಹೆಚ್ಚು. ನಾನು ಇನ್ನು ಮೇಲೆ ಗ್ರಾಮವನ್ನು ಬಿಟ್ಟು ನಗರದಲ್ಲಿ ಸ್ಥಿರವಾಗಿರಲು ಹೊರಟಿದ್ದೇನೆ. ಈ ಪ್ರಾಂತಕ್ಕೆ ಬರುವಾಗ ಅಸ್ತಮಾನವಾಗುವುದೆಂದು ಗೊತ್ತಾಯಿತು. ರಾತ್ರಿಯಲ್ಲಿ ಅಡವಿಯಲ್ಲಿ ಸಿಕ್ಕಿಕೊಳ್ಳುವುದು ಒಳ್ಳೆಯದಲ್ಲ. ಮುಖ್ಯವಾಗಿ ಈ ಹಾರವನ್ನು ಕಾಪಾಡಿಕೊಳ್ಳಬೇಕು. ಆದುದರಿಂದ ರಾತ್ರಿಯನ್ನು ನಿನ್ನ ಮನೆಯಲ್ಲಿ ಕಳೆದು, ಬೆಳಗಾದ ಮೇಲೆ ಹೊರಟುಹೋಗುವುದೆಂದು ಮಾಡಿದೆ. ಆದರೆ ರಾತ್ರಿ ಈ ಹಾರವನ್ನೂ ಕುದುರೆಯನ್ನೂ ಯಾರು ಕಾವಲು ಕಾಯುತ್ತಾರೆಂಬ ಸಮಸ್ಯೆ ಬಂತು. ಆ ಎರಡು ಕೆಲಸಗಳನ್ನೂ ನಿನ್ನಿಂದಲೇ ಮಾಡಿಸಿಕೊಳ್ಳಬೇಕೆಂದು ನಿಶ್ಚಯಿಸಿ, ಮೊದಲು ಕಳ್ಳನ ವೇಷದಲ್ಲಿ ನಿನ್ನಬಳಿಗೆ ಬಂದು ನಿನ್ನನ್ನು ಸ್ವಲ್ಪ ಮೋಸ ಮಾಡಿದೆ. ಆದಕ್ಕಾಗಿ ಚಿಂತೆ ಮಾಡಬೇಡ. ನನಗೆ ಇಷ್ಟು ಸಹಾಯ ಮಾಡಿದ್ದಕ್ಕೆ ಬಹುಮಾನ ಕೊಡುತ್ತೇನೆ, ತೆಗೆದುಕೋಮ್ಮಾ" ಎಂದು ಜಮೀನುದಾರನ ಮಗನು, ಅವಳಿಗೆ ಸ್ವಲ್ಪ ಹಣವನ್ನು ಕೊಟ್ಟು ಕುದುರೆಯ ಮೇಲೆ ಏರಿಕೊಂಡು ಹೊರಟುಹೋದನು.



# ಮುಗ್ಧ ಸೋಮಪ್ಪ

**ಸೋ**ಮಪ್ಪನಿಗೆ ದೊಡ್ಡದೊಂದು ಕುರಿಮಂದೆ ಇದ್ದಿತು. ಅವನು ಒಳ್ಳೆಯವನಾದರೂ ಮುಗ್ಧ ಗುಣದವನು.

ಪಕ್ಕದ ಗ್ರಾಮದಲ್ಲಿದ್ದ ಜಾರಪ್ಪನೆಂಬವನು ಕಾಯಿಲೆ ಬಿದ್ದಿದ್ದು, ದೇಹಪುಷ್ಟಿಗಾಗಿ ಮಾಂಸ ತಿಂದರೆ ಒಳ್ಳೆಯದೆಂದುಕೊಂಡು ಸೋಮಪ್ಪನ ಬಳಿಗೆ ಬಂದನು.

ಅವನು ತನ್ನ ಕಷ್ಟ ಪರಿಸ್ಥಿತಿಯನ್ನು ಹೇಳಲು, ಸೋಮಪ್ಪ ಕನಿಕರದಿಂದ ಅವನ ಕೈಗೆ ಹತ್ತುರೂಪಾಯಿಗಳನ್ನು ಕೊಟ್ಟನು.

ಅದನ್ನು ತೆಗೆದುಕೊಂಡು ಜಾರಪ್ಪ ಸ್ವಲ್ಪ ದೂರ ಹೋಗಿ ತಿರುಗಿ ಬಂದು, "ಅಣ್ಣಾ, ಈ ಹತ್ತು ರೂಪಾಯಿಯನ್ನು ನೀನೇ ಇಟ್ಟುಕೊಂಡು ಚಿಕ್ಕದೊಂದು ಟಗರನ್ನು ಕೊಟ್ಟುಬಿಡು" ಮುಖ್ಯವಾಗಿ ನನಗೆ ಬೇಕಾದ್ದು ಟಗರೇ. ಹುಡುಕಿ ಅಲೆಯುವಷ್ಟು ಶಕ್ತಿಯಿಲ್ಲ" ಎಂದನು.

ಸೋಮಪ್ಪ ಆ ಹತ್ತುರೂಪಾಯಿಯನ್ನು ತೆಗೆದುಕೊಂಡು ಅವನ ಇಷ್ಟದಂತೆ ಒಳ್ಳೆಯ ಒಂದು ಟಗರು ಕರುವನ್ನು ಅವನಿಗೆ ಕೊಟ್ಟನು.

ಜಾರಪ್ಪ ಸ್ವಲ್ಪ ದೂರ ಹೋಗಿ ತಿರುಗಿ ಬಂದು, "ಅಣ್ಣಾ, ಆ ಹತ್ತು ರೂಪಾಯಿ ಮತ್ತು ಈ ಟಗರು ಕರು ಕೂಡಾ ನೀನೇ ಇಟ್ಟುಕೊಂಡು ನನಗೊಂದು ದೊಡ್ಡ ಟಗರನ್ನೇ ಕೊಟ್ಟುಬಿಡು. ಅದೇ ನನಗೂ ನಿನಗೂ ಒಳ್ಳೆಯದು" ಎಂದನು. ಮುಗ್ಧನಾದ ಸೋಮಪ್ಪ ಹಾಗೇ ಮಾಡಿದನು.

ಈ ವಿಧವಾಗಿ ಎರಡು ಮೂರು ಸಾರಿ ಮಾಡಿ ಜಾರಪ್ಪ ಸೋಮಪ್ಪನ ಮಂದೆಯಿಂದ ದೊಡ್ಡದಾದ ಕೊಬ್ಬಿದ ಟಗರನ್ನೇ ಒಯ್ದುಬಿಟ್ಟನು.

ಸೋಮಪ್ಪ ತನ್ನಲ್ಲಿ ಬಹಳ ಲಾಭದಾಯಕವಾದ ವ್ಯಾಪಾರ ಮಾಡಿದೆನೆಂದುಕೊಂಡನು.





# ದೈವಭೀತಿ ರಾಜಭಕ್ತಿ

ಇರಾಣ ದೇಶದ ಒಂದಾನೊಂದು ಗ್ರಾಮದಲ್ಲಿ ಇಬ್ರಾಹೀಂ ಮತ್ತು ಇಸ್ಮಾಯಿಲ್ ಎಂಬ ಇಬ್ಬರು ಕಟ್ಟಿಗೆ ಮಾರಾಟ ಮಾಡುವವರಿದ್ದರು. ಅವರಿಬ್ಬರೂ ದಿನಾ ಕಾಡಿಗೆ ಹೋಗಿ ಮರಗಳನ್ನು ಕಡಿದು ಕಟ್ಟಿಗೆ ಮಾಡಿ ಸಮೀಪದಲ್ಲಿದ್ದ ನಗರಕ್ಕೆ ಹೋಗಿ ಮಾರುತ್ತಿದ್ದರು. ಅದರಿಂದ ಬರುವ ಆದಾಯವು ಅವರಿಬ್ಬರ ಖರ್ಚಿಗೆ ಸಾಕೂಸಾಲದಷ್ಟೇ ಇರುತ್ತಿತ್ತು. ತಮ್ಮ ಈ ಬಡತನದ ಸಂಸಾರಕ್ಕೆ ಹೇಗೆ ವಿಮೋಚನೆ ಕೊಡುವುದೆಂದು ಅವರು ಯಾವಾಗಲೂ ಆಲೋಚಿಸಿ ಕೊಂಡಿರುವರು.

ಅವರಲ್ಲಿ ಇಬ್ರಾಹೀಂ ದೈವಭೀತಿಯೂ ರಾಜಭಕ್ತಿಯೂ ಇರುವವನು. ಆದುದರಿಂದ ಅವನು ದೈವಕ್ಕೂ ರಾಜನಿಗೂ ಒಪ್ಪಿಗೆಯಾಗುವ ರೀತಿಯಲ್ಲಿಯೇ ತಾನು ಧನವಂತನಾಗಬೇಕೆಂದು ಬಯಸಿಕೊಂಡಿದ್ದನು. ಇಸ್ಮಾಯಿಲನಿಗೆ ಈ ಬಗೆಯ ನಂಬಿಕೆಗಳೇನೂ ಇದ್ದಿಲ್ಲ. ದೈವವಾಗಲೀ ರಾಜನಾಗಲೀ ತನ್ನ ದಾರಿದ್ರ್ಯವನ್ನು ತೊಲಗಿಸಲಾರರಾದುದರಿಂದ, ತಾನು ಧನವಂತನಾಗುವ ವಿಷಯದಲ್ಲಿ ಅವರ ಒಪ್ಪಿಗೆಯ ಅಗತ್ಯವೇನಿಲ್ಲವೆಂಬುದು ಅವನ ಉದ್ದೇಶ,

ಒಂದು ದಿನ ಕಾಡಿನಲ್ಲಿ ಅವರಿಬ್ಬರೂ ಒಂದೊಂದು ಬದಿಯಲ್ಲಿ ಕಟ್ಟಿಗೆ ಕಡಿಯುತ್ತಿದ್ದರು. ಇದ್ದಕ್ಕಿದ್ದ ಹಾಗೆ ಇಸ್ಮಾಯಿಲನಿಗೆ ಒಂದು ಆಲೋಚನೆ ಬಂತು. ಅವನು ಇಬ್ರಾಹೀಂನ ಹತ್ತಿರ ಬಂದು, "ನೋಡು ಇಬ್ರಾಹಿಂ. ಕಾಡಿನಲ್ಲಿ ಸಾಧಾರಣವಾಗಿ ನಿಧಿನಿಕ್ಷೇಪಗಳಿರುತ್ತವಂತೆ. ನಮಗೆ ಅಂತಹುದೇನಾದರೂ ಸಿಕ್ಕಿದರೆ ಎಷ್ಟು ಒಳ್ಳೆಯದಿತ್ತು! ಸಿಕ್ಕಬೇಕಲ್ಲ!" ಎಂದು ನಿಟ್ಟುಸಿರಿಟ್ಟನು.

"ಹಾಗೆ ಸಿಕ್ಕಿದರೂ ನಮಗೇನು ಲಾಭ? ನಿಧಿನಿಕ್ಷೇಪಗಳು ರಾಜನಿಗೆ ಸೇರುವಂತಹುದಾಯಿತಲ್ಲ? ಅಂತಹುದು ಎಲ್ಲಾ ಪ್ರಜೆಗಳಿಗೂ ಸೇರಿದುದೆಂಬ ನ್ಯಾಯದಲ್ಲಿ ರಾಜನಿಗೆ ಸೇರುವುದೇ ಸಂಪ್ರದಾಯ" ಎಂದ ಇಬ್ರಾಹೀಂ.

"ನಿನ್ನ ಸಂಪ್ರದಾಯಕ್ಕೆ ಬೆಂಕಿ ಹಚ್ಚಿತು. ಹುಚ್ಚ! ಹುಚ್ಚ!" ಎಂದು ಅವನಿಗೆ ಶಾಪ ಹಾಕುತ್ತ ಇಸ್ಮಾಯಿಲ್ ತನ್ನ ಕೆಲಸಕ್ಕೆ ಹೋದನು.

ಮರುದಿನ ಇಬ್ಬರೂ ಕಾಡಿಗೆ ಹೋಗಿ ಕಟ್ಟಿಗೆಯ ಕೆಲಸ ಮಾಡುತ್ತಿದ್ದಾಗ ಇಬ್ರಾಹೀಂಗೆ ಒಂದು ದೊಡ್ಡ ಮರದ ಬೊಡ್ಡೆ ಕಾಣಿಸಿತು. ಅವನು ಅದನ್ನು ಕಷ್ಟ

ಅನ್ವರ್

ಪಟ್ಟು ಕೊಡಲಿಯಿಂದ ಎರಡು ಭಾಗವಾಗುವಂತೆ ಸೀಳಿದನು. ಅವನಿಗೆ ಆಶ್ಚರ್ಯವೂ ಭಯವೂ ಒಂದೇ ಸಾರಿ ಉಂಟಾಯಿತು. ಏಕೆಂದರೆ ಆ ಮೊದ್ದು ಬೊಡ್ಡೆಯ ಅಡಿಯ ನೆಲದ ಟೊಳ್ಳಿನಲ್ಲಿ ಒಂದು ಚಿನ್ನದ ಪಾತ್ರವಿತ್ತು. ಅದಕ್ಕೊಂದು ಚಿನ್ನದ ತಟ್ಟೆಯ ಮುಚ್ಚಳವೂ ಇತ್ತು. ಆ ಮುಚ್ಚಳವನ್ನು ತೆಗೆದು ನೋಡಲು ಪಾತ್ರದ ತುಂಬಾ ಬಂಗಾರದ ದೀನಾರಗಳಿದ್ದುವು.

ಅವನು ಕೂಡಲೇ ಇಸ್ಮಾಯಿಲನಿರುವಲ್ಲಿಗೆ ಓಡುತ್ತಾ ಹೋದನು. ಇಬ್ರಾಹೀಂನನ್ನು ನೋಡಿ ಇಸ್ಮಾಯಿಲ್ ತುಸು ಗಾಬರಿಬಿದ್ದನು. ತನಗೆ ಬಂಗಾರದ ದೀನಾರ ತುಂಬಿದ ನಿಧಿ ಸಿಕ್ಕಿದೆಯೆಂದು ಅವನು ಹೇಳಿದುದನ್ನು ಕೇಳಿ, "ಅದನ್ನೇನು ಮಾಡ ಬೇಕೆಂದಿರುವಿ ?" ಎಂದು ಕೇಳಿದ.

"ಇನ್ನೇನಿದೆ ? ತೆಗೆದುಕೊಂಡು ಹೋಗಿ ಬಾದ ಷಹಾರಿಗೆ ಕೊಟ್ಟು ಬಿಡುತ್ತೇನೆ. ಅವರು ಸಂತೋಷ ಪಟ್ಟು ಏನಾದರೂ ಕೊಟ್ಟರೆ ತೆಗೆದುಕೊಳ್ಳುತ್ತೇನೆ." ಎಂದ ಇಬ್ರಾಹೀಂ.

"ಒಳ್ಳೇ ದುರ್ಭಾಗ್ಯ ಹಿಡಿದವನೆಂದರೆ ನೀನೇ ನಿಜ. ನಿನಗೆಂದಿಗೂ ಒಳ್ಳೆಯ ಕಾಲ ಬರುವುದಿಲ್ಲ. ಹೋಗು, ಹೋಗು ಹುಚ್ಚ ! ನಿನಗೆ ಸಿಕ್ಕುತ್ತದಲ್ಲ. ನಿನಗೂ ತಲೆ ಸರಿಯಿಲ್ಲ, ಅದಕ್ಕೂ ತಲೆ ಸರಿಯಿಲ್ಲ !" ಎಂದು ಸಿಡುಕಿಕೊಂಡ ಇಸ್ಮಾಯಿಲ್.

"ನ್ಯಾಯವಾಗಿ ನನಗೆ ಐಶ್ವರ್ಯ ಸಿಗುವ ಹಾಗಿದ್ದರೆ ನನ್ನನ್ನು ಹುಡುಕುತ್ತಾ ಅದಾಗಿಯೇ ಬರುತ್ತದೆ. ಅದಕ್ಕಾಗಿ ಅನ್ಯಾಯದಿಂದ ಐಶ್ವರ್ಯ ವಂತನಾಗಲಾರೆ" ಎಂದ ಇಬ್ರಾಹೀಂ.

ಧನಕ್ಕಾಗಿ ತುಂಬ ಪರಿತಪಿಸುವ ಇಸ್ಮಾಯಿಲ್ ತನಗೆ ಸಿಕ್ಕಿದ ದೀನಾರಗಳನ್ನು ನೋಡಲು ಸಹಾ ಬಾರದುದನ್ನು ನೋಡಿ ಇಬ್ರಾಹೀಂಗೆ ಆಶ್ಚರ್ಯ ವಾಯಿತು. ಅವನು ಬಿಂದಿಗೆಯನ್ನೆತ್ತಿ ಒಂದು ಪಕ್ಕ



ದಲ್ಲಿಟ್ಟು, ಆ ಬೊಡ್ಡೆಯನ್ನು ಒಡೆದು ಕಟ್ಟಿಗೆ ಮಾಡಿ, ಬಂಗಾರದ ಪಾತ್ರವು ಕಾಣಿಸದಂತೆ ಕಟ್ಟಿಗೆಗಳ ನಡುವೆ ಇಟ್ಟು ಕಟ್ಟಿ, ಹೊತ್ತುಕೊಂಡು ಮನೆಗೆ ತಲಪಿದನು. ಕಟ್ಟಿಗೆಯನ್ನು ಮೂಲೆಗೆ ಹಾಕಿ ಬಂಗಾರದ ಪಾತ್ರ ವನ್ನು ರಹಸ್ಯವಾಗಿ ರಾಜಧಾನಿಗೆ ತೆಗೆದುಕೊಂಡು ಹೋಗಿ ಬಾದಷಹರ ಪಾದಗಳ ಹತ್ತಿರ ಇಟ್ಟು, ಅದು ತನಗೆ ಹೇಗೆ ಸಿಕ್ಕಿತೆಂಬುದನ್ನೆಲ್ಲಾ ಹೇಳಿದನು.

ಬಾದಷಹನು ತುಂಬಿದ ದರ್ಬಾರಿನಲ್ಲಿ ಅವನ ರಾಜಭಕ್ತಿಯನ್ನು ಮೆಚ್ಚಿಕೊಂಡು ಆ ಪಾತ್ರವನ್ನು ಸ್ವೀಕರಿಸಿಕೊಂಡನು. ಆಮೇಲೆ ಖಜಾನೆಯಿಂದ ನೂರು ದೀನಾರಗಳನ್ನು ತರಿಸಿ ಇಬ್ರಾಹೀಂಗೆ ಬಹು ಮಾನವಾಗಿ ಕೊಟ್ಟು ಕಳುಹಿಸಿದನು. ಇಬ್ರಾಹೀಂ ಆ ಧನದಿಂದ ಕೂಡಲೇ ಸಣ್ಣ ವ್ಯಾಪಾರವನ್ನು ಪ್ರಾರಂಭ ಮಾಡಿದನು.

ಇದು ನಡೆದ ಕೆಲವು ದಿನಗಳ ಮೇಲೆ, ಇಸ್ಮಾಯಿಲ್ ನಕಲೀ ಬಂಗಾರದ ದೀನಾರಗಳನ್ನು,

ಅಪ್ಪಟ ಬಂಗಾರವೆಂದು ರಾಜಧಾನಿ ನಗರದಲ್ಲಿ ವಿನಿಯೋಗಿಸಲು ಪ್ರಯತ್ನಿಸುತ್ತ ಸಿಕ್ಕಿಬಿದ್ದ ಸಂಗತಿ ಇಬ್ರಾಹೀಂಗೆ ಗೊತ್ತಾಯಿತು. ಕೂಡಲೇ ಇಬ್ರಾಹೀಂ ಇಸ್ಮಾಯಿಲನ ಮನೆಗೆ ಹೋಗಿ ವಿಚಾರಿಸಿ ನಿಜ ಸಂಗತಿ ಏನೆಂಬುದನ್ನು ತಿಳಿದುಕೊಂಡು, ಬೇಗಬೇಗನೆ ರಾಜಧಾನಿ ನಗರಕ್ಕೆ ಹೋದನು.

ಇಸ್ಮಾಯಿಲ್ ಬಾದಷಹನ ವಿಚಾರಣೆಗಾಗಿ ನಿರ್ಬಂಧದಲ್ಲಿದ್ದನು. ಇಬ್ರಾಹೀಂ ಬಾದಷಹನ ದರ್ಶನ ಮಾಡಿ, ಇಸ್ಮಾಯಿಲನಿಗೆ ತಾನು ಜಾಮೀನಾಗಿರುವೆನೆಂದೂ ಅವನನ್ನು ಬಿಡುಗಡೆ ಮಾಡಬೇಕೆಂದೂ ಕೇಳಿಕೊಂಡನು.

ಬಾದಷಹನು ಇಬ್ರಾಹೀಂನ ಪ್ರಾರ್ಥನೆಯನ್ನು ಕೇಳಿ, ಸಭೆಯವರೊಂದಿಗೆ ಹೀಗೆಂದನು:

"ದೈವಭೀತಿ, ರಾಜಭಕ್ತಿಗಳಿಂದ ಸಂಪ್ರದಾಯಬದ್ಧವಾಗಿ ಜೀವಿಸಬೇಕೆಂಬವರು ಸುಖವಾಗಿರಬಲ್ಲರು. ಇವುಗಳಿಗೆ ವ್ಯತಿರೇಕವಾಗಿ ನಡೆಯುವವರು ಕಷ್ಟಗಳನ್ನು ಅನುಭವಿಸುವರು. ಇದಕ್ಕೆ ಒಂದು ಸಣ್ಣ ಕಥೆಯನ್ನು ಹೇಳುತ್ತೇನೆ, ಕೇಳಿರಿ. ಇಬ್ಬರು ಕಟ್ಟಿಗೆ ಒಡೆದು ಮಾರಿ ಬದುಕುವ ಬಡವರಿದ್ದರು. ಅವರಲ್ಲಿ ಒಬ್ಬ ದೈವಭೀತಿ ಮತ್ತು ರಾಜಭಕ್ತಿ ಉಳ್ಳವನು. ಒಂದು ದಿನ ಬಾದಷಹನು ವಾಯುವಿಹಾರ ಮಾಡುತ್ತ ಕಾಡಿಗೆ ಹೋದ. ಅವರಿಬ್ಬರ ಸಂಭಾಷಣೆ ಅವನ ಕಿವಿಗೆ ಬಿತ್ತು. ಬಾದಷಹನು ನಕಲೀ ಚಿನ್ನದ ದೀನಾರಗಳು ತುಂಬಿದ ಎರಡು ನಕಲೀ ಚಿನ್ನದ ಬಿಂದಿಗೆಗಳನ್ನು ಅವರು ಕಟ್ಟಿಗೆ ಕಡಿಯುವ ಸ್ಥಳದಲ್ಲಿ ಹುಗಿದಿರಿಸಿದನು. ಅವುಗಳು ಅವರಿಬ್ಬರಿಗೂ ದೊರಕಿವೆ. ಮೊದಲನೆಯವನು ತನ್ನ ಚಿನ್ನದ ಪಾತ್ರವನ್ನು ಸಂಪ್ರದಾಯದಂತೆ ಬಾದಷಹನಿಗೆ ತಂದೊಪ್ಪಿಸಿ ನೂರು ನಿಜವಾದ ದೀನಾರಗಳನ್ನು ಬಹುಮಾನ ಪಡೆದ. ಎರಡನೆಯವನು ಎಲ್ಲವೂ ತನಗೇ ಬೇಕೆಂಬ ದುರಾಶೆಯಿಂದ ಸಂಪ್ರದಾಯಕ್ಕೆ ವಿರುದ್ಧವಾಗಿ ಆ ನಕಲಿ ಚಿನ್ನವನ್ನು ವಿನಿಯೋಗ ಪಡಿಸಲು ಹೋಗಿ ಸಿಕ್ಕಿಬಿದ್ದ. ಮೊದಲನೇಯವನು ಇಬ್ರಾಹೀಂ, ಎರಡನೇಯವನು ಇಸ್ಮಾಯಿಲ್."

ಹೀಗೆ ಹೇಳಿ ಬಾದಷಹನು ಅವರಿಬ್ಬರನ್ನೂ ಸಭಿಕರಿಗೆ ತೋರಿಸಿದನು. ಆಮೇಲೆ ಇಬ್ರಾಹೀಮನ ಜಾಮೀನಿನ ಮೇಲೆ ಹಾಗೂ ಅವನ ಕೋರಿಕೆಯಂತೆ ಕೂಡಾ ಬಾದಷಹನು ಇಸ್ಮಾಯಿಲನನ್ನು ಬಿಟ್ಟುಬಿಟ್ಟನು. ಇಸ್ಮಾಯಿಲ್ ಬುದ್ಧಿ ತಂದುಕೊಂಡು ಕ್ಷಮೆ ಕೇಳಿ ಪಶ್ಚಾತ್ತಾಪಪಟ್ಟನು. ಇಬ್ರಾಹೀಂ ಅವನನ್ನು ತನ್ನ ವ್ಯಾಪಾರದಲ್ಲಿ ಭಾಗಸ್ಥನನ್ನಾಗಿ ಮಾಡಿಕೊಂಡನು. ಕಾಲಕ್ರಮದಲ್ಲಿ ಇಬ್ಬರೂ ದೊಡ್ಡ ವ್ಯಾಪಾರಸ್ಥರಾಗಿ ಪ್ರಾಮಾಣಿಕರೆಂಬ ಒಳ್ಳೆಯ ಹೆಸರನ್ನೂ ಪಡೆದರು.






ಒಂದಾನೊಂದು ದೇಶದಲ್ಲಿ ಮಳೆಯೂ ಬೆಳೆಯೂ ಬರುತ್ತಿದ್ದುವು. ಹಾಗಿದ್ದರೂ ಸಹ ಆಹಾರ ಪದಾರ್ಥಗಳ ಬೆಲೆ ದಿನದಿಂದ ದಿನಕ್ಕೆ ಏರುತ್ತಾ ಹೋಗಿ ಕಡೆಗೆ ಜನರೆಲ್ಲ ಹಾಹಾಕಾರ ಮಾಡತೊಡಗಿದರು.

ದೇಶದೊಳಗಿನ ಸುಖವೂ ನೆಮ್ಮದಿಯೂ ಕ್ಷೀಣಿಸುತ್ತಾ ಹೋಗುವುದನ್ನು ನೋಡಿ ರಾಜನಾದ ಪ್ರಚಂಡಸೇನನು ಚಿಂತೆಗೊಳಗಾದನು. ಪ್ರಜೆಗಳ ಕಷ್ಟ ನಿವಾರಣೆಗಾಗಿ ಖಜಾನೆಯಿಂದ ದ್ರವ್ಯವನ್ನು ಸಾಕಷ್ಟು ಸಹಾಯವಾಗಿ ಕೊಟ್ಟನು. ಖಜಾನೆ ಖಾಲಿಯಾಗುವ ಪರಿಸ್ಥಿತಿ ಬಂದರೂ, ಹಣದ ಚಲಾವಣೆ ಬಹಳವಾಗಿ ಬೆಲೆ ವಾಸಿ ಹೆಚ್ಚೇ ಆಯಿತು.

ಇಂತಹ ವಿಚಿತ್ರವಾದ ಬರದ ಬಾಧೆಯಿಂದ ಪ್ರಜೆಗಳನ್ನು ಹೇಗೆ ಕಾಪಾಡುವುದೆಂದು ರಾಜನು ಮಂತ್ರಿಗಳೊಂದಿಗೂ ಉದ್ಯೋಗಸ್ಥರೊಂದಿಗೂ ಆಲೋಚನೆ ಮಾಡಿದನು. ಆದರೆ ಯಾರೂ ಆ ಸಮಸ್ಯೆಗೆ ಸರಿಯಾದ ದಾರಿಯನ್ನು ಹೇಳಲಾರದೆ ಹೋದರು. ಪುರೋಹಿತರು ಮಾತ್ರ ಹೋಮಗಳನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಿದರೆ ಈ ಬಗೆಯ ಬಾಧೆಗಳೇನೂ ಇರಲಾರದೆಂದರು. ಪ್ರಚಂಡಸೇನನು ಆ ಪುರೋಹಿತರನ್ನೇ ಆ ಹೋಮ ಕಾರ್ಯಗಳಿಗೆ ನಿಯಮಿಸಿ ಅದಕ್ಕೆ ಬೇಕಾದಷ್ಟು ಧನವನ್ನೂ ಕೊಟ್ಟನು.

ಹೋಮಗಳು ನಿರ್ವಿಘ್ನವಾಗಿ ನಡೆದುವು. ಕೆಲವರು ಕೋಳಿ ಮೇಕೆ ಮುಂತಾದ ಪ್ರಾಣಿಗಳನ್ನು ಗ್ರಾಮದೇವತೆಗಳಿಗೆ ಬಲಿ ಕೊಟ್ಟು ಪೂಜೆ ಮಾಡಿಸಿದರು. ಏನಾದರೂ ಬೆಲೆ ಇಳಿಮುಖವಾಗಲಿಲ್ಲ.

ಧಾನ್ಯಗಳೂ ಇನ್ನೂ ಇತರ ಆಹಾರ ಪದಾರ್ಥಗಳೂ ಪ್ರಜೆಗಳಿಗೆ ತಲಪುವ ಹಾಗೆ ಮಾಡುವವರು ವ್ಯಾಪಾರಿಗಳಾದುದರಿಂದ, ಪ್ರಚಂಡಸೇನನು ರಾಜ್ಯದಲ್ಲಿರುವ ಎಲ್ಲಾ ವ್ಯಾಪಾರಿಗಳನ್ನೂ ಕರೆಯಿಸಿದನು. "ನೀವು ಆಹಾರಧಾನ್ಯಗಳ ಬೆಲೆ ತಗ್ಗಿಸಿ ಪ್ರಜೆಗಳಿಗೆ ಮಾರಿದರೆ ಬೆಲೆ ತಗ್ಗಿದಂತಾಯಿತಷ್ಟೇ. ನೀವೇಕೆ ಹೆಚ್ಚು ಬೆಲೆಗೆ ಮಾರುವಿರಿ?" ಎಂದು ಪ್ರಚಂಡಸೇನನು ವ್ಯಾಪಾರಿಗಳನ್ನು ಕೇಳಿದ.

ಅವರು ರಾಜನೊಂದಿಗೆ, "ಮಹಾಪ್ರಭುಗಳೇ, ನಮ್ಮ ರಾಜ್ಯದಲ್ಲಿ ಸಾಕಾಗುವಷ್ಟು ಆಹಾರಧಾನ್ಯಗಳ ಉತ್ಪತ್ತಿಯಾದುದರಿಂದಲೇ ಇಂತಹ ಪರಿಸ್ಥಿತಿ ಬಂದಿದೆ. ಹೆಚ್ಚು ಹಣಕ್ಕೆ ಕೊಂಡುಕೊಂಡ ಸರಕನ್ನು ಕಡಿಮೆ ಬೆಲೆಗೆ ನಾವು ಮಾತ್ರ ಹೇಗೆ ಮಾರಲು

ಜಿ. ವಿಜಯ

ಸಾಧ್ಯವಾದೀತು ಪ್ರಭುಗಳೇ?" ಎಂದರು. ವ್ಯಾಪಾರಸ್ಥರು ಹೇಳಿದ ಮಾತುಗಳನ್ನು ಪ್ರಚಂಡಸೇನನು ನಂಬಲಿಲ್ಲ. ದೇಶದಲ್ಲೆಲ್ಲಿಯೂ ಪೈರು ಹಾಳಾಯಿತೆಂದಾಗಲೀ, ಹುಳಬಿದ್ದಿತೆಂದಾಗಲೀ ಸಮಾಚಾರ ಬಂದಿರಲಿಲ್ಲ. ಹಾಗಿರುವಾಗ ಆಹಾರ ಧಾನ್ಯಗಳು ಕಡಿಮೆಯಾಗುವುದೆಂದರೇನು? ಅರ್ಥವಿಲ್ಲದ ಮಾತು. ವರ್ತಕರು ಧಾನ್ಯಗಳನ್ನೂ ಸಂಬಾರ ಜಿನಸುಗಳನ್ನೂ ಅಡಗಿಸಿಟ್ಟು ನಾಟಕವಾಡುವರೆಂದು ರಾಜನಿಗೆ ಅನುಮಾನವಾಯಿತು. ಅವನು ಆಹಾರ ವಸ್ತುಗಳಿಗೆ ನ್ಯಾಯವಾದ ಬೆಲೆಯನ್ನು ನಿರ್ಣಯಿಸಿ, ಅದಕ್ಕಿಂತ ಹೆಚ್ಚು ಬೆಲೆ ಕೇಳಿದವರನ್ನು ದಂಡಿಸುವೆನೆಂದು ವರ್ತಕರಿಗೆ ಎಚ್ಚರಿಕೆಕೊಟ್ಟನು.

ಕೂಡಲೇ ದೊಡ್ಡ ವರ್ತಕರೆಲ್ಲರೂ ತಮ್ಮ ಅಂಗಡಿ ಒಂಡಸಾಲೆಗಳನ್ನು ಮುಚ್ಚಿಬಿಟ್ಟರು. ದುಡ್ಡಿದ್ದವರಿಗೆ ಮಾತ್ರ ರಹಸ್ಯವಾಗಿ ಬೇಕಾದುದೆಲ್ಲ ಹಿಂದಿನ ಬಾಗಿಲಿನಲ್ಲಿ ಸಿಗುತ್ತಲೇ ಇದ್ದುವು.

ಈ ಪರಿಸ್ಥಿತಿಯಲ್ಲಿ ದೇಶಾಟನೆಗೆ ಹೋಗಿದ್ದ ಮಂತ್ರಿಕುಮಾರನಾದ ರವಿವರ್ಮನು ಸ್ವದೇಶಕ್ಕೆ ತಿರುಗಿಬಂದನು. ತಿರುಗಾಡಿಬಂದವನಾದುದರಿಂದ ದೇಶವು ಎಷ್ಟು ದುಸ್ಥಿತಿಯಲ್ಲಿರುವುದೆಂದು ಅವನಿಗೆ ಗೊತ್ತಾಗಿತ್ತು. ಅಂತೆಯೇ ದುಸ್ಥಿತಿಯನ್ನು ಸುಸ್ಥಿತಿಗೆ ತರಬೇಕಾದರೆ ಏನು ಮಾಡಬೇಕೆಂಬುದು ಕೂಡಾ ಅವನಿಗೆ ಗೊತ್ತಾಯಿತು. ಅವನು ತನ್ನ ಆಲೋಚನೆಯನ್ನು ಪ್ರಚಂಡಸೇನನೊಂದಿಗೆ ಹೇಳಿದನು. ಪ್ರಚಂಡಸೇನನಿಗೂ ಆ ಉಪಾಯ ಸರಿಯೆನಿಸಿತು.

ಆಹಾರ ಧಾನ್ಯಗಳನ್ನು ಹೊರದೇಶಗಳಿಂದ ತರಿಸುವುದಾಗಿಯೂ, ಇನ್ನು ಪ್ರಜೆಗಳು ನಿಶ್ಚಿಂತರಾಗಿರಬಹುದೆಂತಲೂ ರಾಜನು ರಾಜ್ಯದಲ್ಲೆಲ್ಲಾ ಪ್ರಕಟಿಸಿದನು. ಅಗ್ಗದಲ್ಲಿ ಆಹಾರ ಪದಾರ್ಥಗಳು ಬರುತ್ತಿರುವ ಸಂಗತಿ ಪ್ರಜೆಗಳಿಗೆ ತಿಳಿಯಿತು.

ಎರಡು ದಿನಗಳಲ್ಲೇ ಬೆಳಗ್ಗಿನ ಹೊತ್ತಿನಲ್ಲಿ ಗಾಡಿಗಳ ಸಾಲು ಬರತೊಡಗಿದುವು. ಗಾಡಿಗಳಲ್ಲಿ ತುಂಬಾ ಧಾನ್ಯದ ಮೂಟೆಗಳು. ಅದನ್ನು ನೋಡಿ ವರ್ತಕರಿಗೆಲ್ಲಾ ನಡುಕ ಉಂಟಾಯಿತು. ಇನ್ನು ಮೇಲೆ ಅವರು ಅಡಗಿಸಿಟ್ಟ ಧಾನ್ಯ ಪದಾರ್ಥಗಳನ್ನು ಕೇಳುವವರಾರು? ಅವುಗಳನ್ನು ಏನು ಮಾಡುವುದು? ಅತ್ಯಾಶೆಗೆ ಇನ್ನು ತಾವಿಲ್ಲವೆಂದುಕೊಂಡು, ಅವರೆಲ್ಲ ಕೂಡಲೇ ಬೆಲೆಗಳನ್ನು ತಗ್ಗಿಸಿ ಅಂಗಡಿಗಳನ್ನು ತೆರೆದು ಚುರುಕಾಗಿ ಮಾರಾಟ ಮಾಡಲು ಕುಳಿತರು.

ಬರಗಾಲ ಮಾಯವಾಯಿತು. ಎಲ್ಲರಿಗೂ ಅಗ್ಗದಲ್ಲಿ ಬೇಕಾದಷ್ಟು ಆಹಾರ ಪದಾರ್ಥಗಳು ಸಿಗತೊಡಗಿದುವು. ಮಂತ್ರಿಕುಮಾರನು ತರಿಸಿದ ಉಮಿಯ ಚೀಲಗಳನ್ನು ರಾಜಪ್ರಾಂಗಣದಲ್ಲಿ ಭದ್ರವಾಗಿ ಇರಿಸಲ್ಪಟ್ಟುವು.






ಪೂರ್ವ ತೀರದಲ್ಲಿ ಕುಜಂಗವೆಂಬ ಚಿಕ್ಕದೊಂದು ರಾಜ್ಯವಿತ್ತು. ಪ್ರದೀಪವು ಅದರ ರಾಜಧಾನಿ. ಅದನ್ನು ಪಾಲಿಸಿದ ರಾಜರು ಶೌರ್ಯ ಪರಾಕ್ರಮಗಳಲ್ಲಿ ಪ್ರಸಿದ್ಧರೆನಿಸಿ ವೃಷಭರಾಜರೆಂದು ಹೆಸರು ಪಡೆದಿದ್ದರು. ಅಲ್ಲಿಯ ಪ್ರಜೆಗಳು ಮಹಾನದಿಯಲ್ಲಿಯೂ ಸಮುದ್ರದಲ್ಲಿಯೂ ಇದಿರಿಲ್ಲದ ವೀರರು. ರಾಜಾ ಚಂದ್ರಧ್ವಜನಿಗೆ ವೀರವೃಷಭನೆಂದು ಹೆಸರು.




ಬ್ರಿಟಿಷರು ಕ್ರಮವಾಗಿ ಭಾರತ ದೇಶವನ್ನು ಆಕ್ರಮಿಸುತ್ತಾ ಬಂದು, ಈ ಚಿಕ್ಕ ರಾಜ್ಯವನ್ನು ಜಯಿಸಲು ಬಹಳ ಶ್ರಮಪಟ್ಟರು. ಚಂದ್ರಧ್ವಜನ ನಾಯಕತ್ವದಲ್ಲಿ ಕುಜಂಗದ ನಾವಿಕರು, ಸಮುದ್ರ ತೀರದಲ್ಲಿ ಲಂಗರು ಹಾಕಿ ನಿಲ್ಲಿಸಿದ ಬ್ರಿಟಿಷ್ ನೌಕೆಗಳನ್ನು ತುಂಬ ಪೀಡಿಸಿದರು.



ಬ್ರಿಟಿಷರ ಸೈನ್ಯ ಕುಜಂಗವನ್ನು ಮುತ್ತಿತು. ಚಂದ್ರಧ್ವಜನ ಸೈನಿಕರಿಗೆ ಶ್ರೇಷ್ಠವಾದ ಆಯುಧಗಳಿಲ್ಲದಿದ್ದರೂ ವೀರೋಚಿತವಾಗಿ ಹೋರಾಡಿದರು. ಕಡೆಗೆ ಕೋಟೆ ಬ್ರಿಟಿಷರಿಗೆ ವಶವಾಯಿತು.



ಆದರೆ ಚಂದ್ರಧ್ವಜನು ಸಿಕ್ಕಿಬೀಳಲಿಲ್ಲ. ಕೆಲವೇ ಮಂದಿ ಅಂಗರಕ್ಷಕರೊಂದಿಗೆ ಅವನು ಸಮುದ್ರ ತೀರದಲ್ಲಿದ್ದ ದಟ್ಟವಾದ ಅರಣ್ಯದೊಳಗೆ ತಪ್ಪಿಸಿ ಕೊಂಡನು.

ಬ್ರಿಟಿಷರು ಕುಜಂಗವನ್ನು ಗೆದ್ದರೆಂಬ ಮಾತೇ ಹೊರತು ಆ ಪ್ರಾಂತದಲ್ಲಿರುವುದು ಅವರಿಗೆ ಕಷ್ಟವಾಯಿತು. ಚಂದ್ರಧ್ವಜನ ಕಡೆಯ ಬಂಟರು ಅವಕಾಶದೊರೆತಾಗಲೆಲ್ಲ ಬ್ರಿಟಿಷರ ಶಿಬಿರಗಳಿಗೆ ಬೆಂಕಿ ಹಚ್ಚಿ, ಅವರ ಮೇಲೆ ದಾಳಿ ಮಾಡಿ ಪೀಡಿಸುತ್ತಿದ್ದರು.





ಚಂದ್ರಧ್ವಜನನ್ನು ಹಿಡಿದ ಹೊರತು ತಮಗೆ ಶಾಂತಿ ಇಲ್ಲವೆಂದು ಬ್ರಿಟಿಷರಿಗೆ ತಿಳಿದು ಹೋಯಿತು. ಒಂದು ದಿನ ಅರಣ್ಯದಲ್ಲಿ ಚಂದ್ರ ಧ್ವಜನು ಒಬ್ಬಂಟಿಗನಾಗಿ ಧ್ಯಾನ ಸಮಾಧಿ ಯಲ್ಲಿರುವಾಗ ಗೂಢಚಾರರ ಸಹಾಯದಿಂದ ಬ್ರಿಟಿಷರು ಅವನನ್ನು ಹಿಡಿದುಕೊಂಡರು.

ಖೈದಿ ಚಂದ್ರವರ್ಮನನ್ನು ಕಟಕಕ್ಕೆ ತಂದು ಮಹಾನದಿಯ ತೀರದ ಬಾರಾಬತಿ ಕೋಟೆಯೊಳಗೆ ಬಂಧಿಸಿಟ್ಟರು. ಆದರೆ ಅವನನ್ನು ಹಿಡಿದುಕೊಂಡವರು ಅವನ ಸುತ್ತಲೂ ಸೇರಿ ಅವನು ಹೇಳುವ ಸ್ವಾರಸ್ಯವಾದ ಕಥೆಗಳನ್ನು ಕೇಳಿ ಆನಂದಿಸುತ್ತಿದ್ದರು.





ಅಷ್ಟೇ ಅಲ್ಲದೆ ಅವನು ಬಿಳೀ ದೊರೆಗಳಿಗೆ ಅನೇಕ ಬಗೆಯ ವ್ಯಾಯಾಮ ಕ್ರೀಡೆಗಳನ್ನು ಕಲಿಸತೊಡಗಿದ. ಅವುಗಳಲ್ಲಿ ಅವನಿಗೆ ಒಳ್ಳೆಯ ಪ್ರಾವೀಣ್ಯತೆಯಿತ್ತು. ಹೀಗೆಯೇ ಅನೇಕ ತಿಂಗಳು ಕಳೆದುವು.



ಒಂದು ದಿನ ಸಾಯಂಕಾಲ ನದಿಯ ಮೇಲೆ ಅತ್ಯಂತ ಸುಂದರವಾದ ದೋಣಿಯೊಂದು ಕಾಣಿಸಿತು. ಅದರಲ್ಲಿ ಹುಟ್ಟು ಹಾಕುವವರು ೩೭ ಮಂದಿ ಇದ್ದರು. ಆ ದೋಣಿಯನ್ನು ನೋಡಿ ದೊರೆಗಳೂ ದೊರೆಸಾನಿಗಳೂ, ಅವರ ಮಕ್ಕಳೂ ಬಹಳ ಸಂಭ್ರಮಗೊಂಡರು. ಅಂತಹ ಕ್ರೀಡಾನೌಕೆಯನ್ನು ಅವರೆಂದೂ ನೋಡಿರಲಿಲ್ಲ.



ವಿಚಾರಿಸಲಾಗಿ ಆ ದೋಣಿ ಒಬ್ಬ ರಾಜನದೆಂದೂ, ಅವನು ತೀರಿಹೋದುದರಿಂದ ಇದೀಗ ಮಾರಾಟಕ್ಕೆ ಇರುವುದೆಂದೂ ಗೊತ್ತಾಯಿತು. "ಬೆಲೆಯೆಷ್ಟು?" ಎಂದು ದೊರೆಗಳು ಕೇಳಿದರು. "ಇದರ ಬೆಲೆಯನ್ನು ರಾಜರಾಗಿರುವವರೇ ಹೇಳಬೇಕು. ಇಂತಹ ವಿಲಾಸ ನೌಕೆಗಳನ್ನು ತಯಾರಿಸುವವರು ಅವರೇ" ಎಂದ ದೋಣಿಯ ಒಡೆಯ.



ಕುತೂಹಲಗೊಂಡ ದೊರೆಗಳು ಕೋಟೆಯೊಳಗಿನಿಂದ ಚಂದ್ರಧ್ವಜನನ್ನು ಹೊರಗೆ ತಂದು, ಆ ದೋಣಿಯನ್ನು ಪರೀಕ್ಷಿಸಿ ಬೆಲೆ ಕಟ್ಟಲು ಹೇಳಿದರು. ಚಂದ್ರಧ್ವಜನು ದೋಣಿಯನ್ನೇರಿದನು.



ಕೂಡಲೇ ೩೬ ಹುಟ್ಟುಗಳೂ ಒಮ್ಮೆಗೇ ಆಡಿದುವು. ರೆಪ್ಪೆ ಮುಚ್ಚುವುದರೊಳಗೆ ದೋಣಿ ನದಿಯಲ್ಲಿ ಹಾರಿ ಹಾರಿ ಹರಿದು ಕಣ್ಮರೆಯಾಗಿ ಹೋಯಿತು. ಎಲ್ಲಾ ಮೀರಿಹೋದ ಮೇಲೆ ದೊರೆಗಳಿಗೆ ಅರ್ಥವಾಯಿತಷ್ಟೇ. ಚಂದ್ರಧ್ವಜನನ್ನು ಅವನ ಪ್ರಜೆಗಳೂ, ಮಂತ್ರಿ ಪಟ್ಟಾಜೋಷಿಯೂ ಬಿಡಿಸಿಕೊಂಡು ಹೋಗಿದ್ದರು.

# ಕಥಾ ಶೀರ್ಷಿಕೆಯ ಸ್ಪರ್ಧೆ

## ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!

?

**ಹ**ತ್ತು ಮಂದಿ ವರ್ತಕರು ತುಂಬಾ ಹಣ ಸಂಪಾದನೆ ಮಾಡಿ ಅರಣ್ಯ ಮಾರ್ಗದಲ್ಲಿ ಬರುವಾಗ, ಆಯುಧಧಾರಿಗಳಾದ ಮೂರು ಮಂದಿ ಕಳ್ಳರು ಅವರ ಮುಂದೆ ಹಾರಿ, ಎಲ್ಲಾ ವರ್ತಕರನ್ನೂ ಸುಲಿದರು. ಹಣದೊಂದಿಗೆ ವರ್ತಕರ ಉಡುಗೆತೊಡುಗೆಗಳನ್ನೂ ಎಳೆದುಕೊಂಡು, ಅವರನ್ನೆಲ್ಲ ಲಂಗೋಟಿಯಲ್ಲಿ ನಿಲ್ಲಿಸಿ "ಈಗ ನೀವೆಲ್ಲಾ ನೃತ್ಯ ಮಾಡಿ ನಮ್ಮನ್ನು ಸಂತೋಷಪಡಿಸಿರಿ, ಹುಂ" ಎಂದು ಆಜ್ಞಾಪಿಸಿ, ಆಯುಧಗಳನ್ನು ಕೆಳಗಿಟ್ಟು ನೆಲದ ಮೇಲೆ ಕುಳಿತರು.

ನಿರಾಯುಧರಾದ ವರ್ತಕರು ಕಳ್ಳರು ಹೇಳಿದಂತೆ ಮಾಡಬೇಕಾಯಿತು. ಅವರು ಹತ್ತು ಮಂದಿ ಗಳಿದ್ದರೆ ಕಳ್ಳರು ಮೂವರಿದ್ದಾರೆ. ಈಗ ಕಳ್ಳರ ಕೈಯ್ಯಲ್ಲಿ ಆಯುಧಗಳಿಲ್ಲ. ಇದನ್ನು ಗಮನಿಸಿದ ಗಟ್ಟಿಗನಾದ ವರ್ತಕನೊಬ್ಬ ಹೀಗೆ ಹಾಡುತ್ತಾ ನಾಟ್ಯಕ್ಕೆ ಪ್ರಾರಂಭಿಸಿದ.

"ಮೂರು ಮೂರ್ಲಿ ಒಂಭತ್ತು.
ಉಳಿದದ್ದೇ ಹತ್ತು!"

ಇದೇನೋ ಹಾಸ್ಯದ ಪದವೆಂದುಕೊಂಡರು ಕಳ್ಳರು. ಆದರೆ ಉಳಿದ ವರ್ತಕರು ಅದರ ಅರ್ಥವನ್ನು ಗ್ರಹಿಸಿ, ಮೂರು ಗುಂಪುಗಳಾಗಿ ಸೀಳಿ, ಸಮಯ ನೋಡಿ, ಥಕ್ಕನೆ ಕಳ್ಳರ ಮೇಲೆ ಮೂವರಂತೆ ಬಿದ್ದು ಹಿಡಿದುಕೊಂಡರು. ಹಾಡಿದವನು ಮೂವರು ಕಳ್ಳರ ಕೈಗಳನ್ನೂ ಕಾಲುಗಳನ್ನೂ ಬಟ್ಟೆಗಳಿಂದ ಕಟ್ಟಿದನು. ಬಳಿಕ ಕಳ್ಳರನ್ನು ಎಳೆದುಕೊಂಡು ಹೋಗಿ ರಾಜನಿಗೆ ಒಪ್ಪಿಸಿದರು.

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಫೆಬ್ರುವರಿ ೧೫ ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೭ ಏಪ್ರಿಲ್ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಡಿಸೆಂಬರ್ '೭೬ ರ ಸ್ಪರ್ಧೆಯ ಫಲಿತಾಂಶ: **ಮಾಯೆಯಲ್ಲಿ ಬಿದ್ದ ಮಾವ**

ಕಳುಹಿಸಿದವರು: ಎಂ. ವಿಶಾಲಾಕ್ಷಿ, ಫೈನಾನ್ಸ್ ಬ್ರ್ಯಾಂಚ್, ಬೆಂಗಳೂರು ಯೂನಿವರ್ಸಿಟಿ - ೫೬೦ ೦೫೬

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೭ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Sharma Studio

★



B. Sreesailam

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಫಿಬ್ರವರಿ ೧೫ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ೧೯೭೬ ಡಿಸೆಂಬರ್ ತಿಂಗಳಿನ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಬಟ್ಟೆಯಲ್ಲಿ ಚಿಟ್ಟೆ**

ಎರಡನೇ ಫೋಟೋ: **ಗೆಜ್ಜೆಯಲ್ಲಿ ಹೂವು**

ಕಳುಹಿಸಿದವರು: **ಕು. ಯಶೋದ, ಟಿ. ಕಾಂಚನ್,**

ಪೋಸ್ಟ್ ಕಾಪು, ದ. ಕ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama




# ಕ್ರ್ಯಾಕೀಸ್

## ಚೂಯಿಂಗ್ ಗಮ್ ಮೂಲಕ
## ಎನ್‌ಪಿ ಅವರು ಚೂಯಿಂಗ್ ಗಮ್‌ಗಳ ಕ್ಷೇತ್ರದಲ್ಲಿ
## ತಮ್ಮ ಹೆಸರನ್ನು ನೆಲೆಗೊಳಿಸಿದ್ದಾರೆ

ಉತ್ತಮ ದರ್ಜೆ ಹಾಗೂ ಅನುಪಮ ಸ್ವಾದ. ಇವುಗಳಿಂದಾಗಿ ಎನ್‌ಪಿ ಕ್ರ್ಯಾಕೀಸ್ ಭಾರತದಾದ್ಯಂತ ಎಲ್ಲರಿಗೂ ಅಚ್ಚುಮೆಚ್ಚಿನವಾಗಿವೆ.

ಚಿಕ್ಕವರಿಗೂ, ದೊಡ್ಡವರಿಗೂ ಸಹ ಅತ್ಯಂತ ಪ್ರಿಯವಾದ, ಮೋಜಿನ ಕ್ರ್ಯಾಕೀಸ್ ಎಲ್ಲೆಲ್ಲೂ ಆನಂದದ ಲಹರಿಯನ್ನು ಹರಡುತ್ತವೆ. ಕ್ರ್ಯಾಕೀಸ್ ಚೂಯಿಂಗ್ ಗಮ್ ಸದಾ ನಿಮ್ಮ ಸಂಗಾತಿಯಾಗಿರಲಿ !

ಐಎಸ್‌ಐ ಗುಣಮುದ್ರೆ ಇರುವ ಏಕಮಾತ್ರ ಚೂಯಿಂಗ್ ಗಮ್.










ದಿ ನ್ಯಾಷನಲ್ ಪ್ರೊಡಕ್ಟ್ಸ್,
ಬೆಂಗಳೂರು 560 006.




ನಿಮಗೆ ಇಷ್ಟವಾದ ಸ್ವಾದಿಷ್ಟ ತಿನಿಸು!

Dattaram NP4R KAN



February 1977

# ಮಾಯಾಸರೋವರ

## ೧೩

[ ಕೆರೆಯ ನೀರಿನಲ್ಲಿ ಮುಳುಗಿದ ಜಲಗ್ರಹವನ್ನು ಮಕರಕೇತು ಬೆಟ್ಟದ ಮೇಲಿನ ಜಲಾಶಯಕ್ಕೆ ಒಯ್ದು, ಅಲ್ಲಿ ಜಯಶೀಲ ಮತ್ತು ಸಿದ್ಧಸಾಧಕರನ್ನು ಬಿಟ್ಟು ತನ್ನ ಆನೆಯೊಂದಿಗೆ ಮುಳುಗಿ ಮಾಯವಾದನು. ಜಯಶೀಲ ಸಿದ್ಧಸಾಧಕರು ಜಲಪಾತದಲ್ಲಿ ಸಿಕ್ಕಿ ಕಣಿವೆಗೆ ಬಿದ್ದರು. ಬೋಧವಿಲ್ಲದೆ ಬಿದ್ದಿದ್ದ ಸಿದ್ಧಸಾಧಕನನ್ನು ಒಂದು ಹುಲಿ ಭಕ್ಷಿಸಲು ನೋಡುವಾಗ ಜಯಶೀಲ ಬಿದ್ದಲ್ಲಿಂದೆದ್ದು ಅಲ್ಲಿಗೇ ಹೋದ.]

ಹಸಿವೆಯ ಪೀಡನೆಯಿಂದಿದ್ದ ಆ ಕುಂಟ ಹುಲಿ ಬೋದವಿಲ್ಲದೆ ಬಿದ್ದವನನ್ನು ಎಟಕರಿಸಿ ಕಬಳಿಸುವ ...ತ್ತುಗಡೆಯಲ್ಲಿರುವಾಗಲೇ ಜಯಶೀಲನು "ಹೋ! ಹೋ!" ಎಂದು ಕೂಗುತ್ತ ವೇಗವಾಗಿ ಓಡಿದ. ಹುಲಿ ತನ್ನ ಮುಂಗಾಲಿನ ಪಂಜಾದಿಂದ ಸಿದ್ಧಸಾಧಕನ ತಲೆಯನ್ನು ಹೊಡೆಯಲು ಎತ್ತಿದಾಗ, ಜಯಶೀಲನು ಅದರ ಲಕ್ಷ್ಯವನ್ನು ಮರಳಿಸಲಿಕ್ಕಾಗಿ ಕರ್ಕಶವಾಗಿ ಕೂಗಿ, ಅದರ ಪಕ್ಕದಲ್ಲಿ ಬೀಳುವಂತೆ ಕಲ್ಲುಗಳನ್ನೆತ್ತಿ ಹಾಕಿದ. ಅವನು ಬಿಸುಟ ಎರಡನೇ ಕಲ್ಲು ಅದರ ಮೇಲೆಯೇ ಬಿದ್ದು ತಲೆ ತಿರುಗಿಸಿತು ಗುರ್ರೆನ್ನುತ್ತ.

ಆ ಸಮಯದಲ್ಲಿ ಜಯಶೀಲನು ಹುಲಿಯನ್ನು ಸಮೀಪಿಸಲು ಇನ್ನೂ ಇಪ್ಪತ್ತು ಮೂವತ್ತು ಅಡಿಗಳಿದ್ದುವು. ಮನುಷ್ಯನ ಕೂಗಿನೊಂದಿಗೆ ಕಲ್ಲು ಬಂದು ಶರೀರಕ್ಕೆ ತಾಗಿದ ಕೂಡಲೇ ಹುಲಿ ಗಾಂಡ್ರೆನ್ನುತ್ತಾ ಹಿಂದಕ್ಕೆ ತಿರುಗಿತು. ಸರಿಯಾಗಿ ತಿರುಗಲೂ ಅದಕ್ಕಾಗಲಿಲ್ಲ. ಅಷ್ಟರೊಳಗೆ ಜಯಶೀಲನು ಹಾರೋಟದಿಂದ ಹೋಗಿ, ಪೆಟ್ಟುಬಿದ್ದ ಹುಲಿಯ ಹಿಂದಿನ ಕಾಲುಗಳನ್ನು ಹಿಡಿದು ಎಳೆದು, ದೂರ ಬೀಳುವಂತೆ ಹೊರಳಿಸಿ ಹಾಕಿದ. ಬಹಳ ಹೊತ್ತಿನವರೆಗೆ ಸ್ಮೃಹೆ ತಪ್ಪಿ ಬಿದ್ದಿದ್ದ ಸಿದ್ಧ



ಸಾಧಕನಿಗೆ ಆಗಳಾಗಲೇ ಎಚ್ಚರ ಬರ ತೊಡಗಿತ್ತು. ಹುಲಿಯ ಗರ್ಜನೆಯನ್ನು ಕೇಳಿ, ಅದು ತನ್ನ ಮೇಲೆಯೇ ಎರಗಿತೆಂದುಕೊಂಡವನಂತೆ, "ಅಯ್ಯೊ! ಮಹಾಕಾಳಾ! ಕಾಪಾಡು!" ಎಂದು ಕೆಟ್ಟ ಸ್ವರ ದಿಂದ ಕೂಗುತ್ತಾ ಹಾರಿಬಿದ್ದದ್ದು ಕುಳಿತ. ಆಗ ಮೊದಲು ಅವನ ಕಣ್ಣಿಗೆ ಬಿದ್ದುದೇ ಹುಲಿ! "ಓಹ್! ಜೈ ಮಹಾಕಾಳಾ!" ಎಂದು ಕೂಗುತ್ತ ಹಾರಿನಿಂತು, ಶೂಲವೆತ್ತುವೆನೆಂಬ ಅಭ್ಯಾಸದಂತೆ ಕೈಯನ್ನೆತ್ತಿದ. ಆಗ ತಾನೇ ಶೂಲವಿಲ್ಲದಿರುವುದು ಗೊತ್ತಾಗಿ, ಭಯ ದಿಂದ ಹಿಂದೆ ಹಿಂದೆ ಹೋಗಿ ನೀರಿಗೆ ಬಿದ್ದ.

ಸಿದ್ಧಸಾಧಕನು ಬದುಕಿರುವನೆಂದು ತಿಳಿದು, ಅದೂ ಕೈಕಾಲುಗಳ ಸ್ವಾಧೀನತೆಯೊಂದಿಗಿರುವುದನ್ನು ನೋಡಿ, ಜಯಶೀಲನು ಅವನ ವಿಷಯದಲ್ಲಿ ಸಮಾಧಾನಗೊಂಡು ಆತುರವನ್ನು ಬಿಟ್ಟು, ಹುಲಿಯ ಹಿಂಗಾಲುಗಳನ್ನು ಹಿಡಿದು ಅದನ್ನು ಇನ್ನಷ್ಟು ದೂರಕ್ಕೆ ಎಳೆದು ಹಾಕಿ, ಸಿದ್ಧಸಾಧಕನ ಬಳಿಗೆ ಬಂದನು. "ಇನ್ನೇನೂ ಹೆದರಬೇಡವೋ ಸಿದ್ಧ ಸಾಧಕಾ! ನಿನ್ನ ದೃಷ್ಟಿಗೆ ಆ ಹುಲಿಯು ಹೊರ... ಅದರ ಹಿಂದೆಯೇ ಇರುವ ನಾನು ಕಾಣುವು... ಇಲ್ಲವೇನು? ಒಳ್ಳೇ ಹುಲಿ ಹುಚ್ಚನಪ್ಪಾ!" ಎಂದ...

ಅವನನ್ನು ನೋಡಿದ ಕೂಡಲೇ ಸಿದ್ಧಸಾಧಕ... ಬೇಗಬೇಗನೇ ನೀರಿನಲ್ಲಿ ಎದ್ದು ನಿಂತು, "ಓ! ಓ! ಮಹಾಕಾಳನ ದಯೆ! ಜಯಶೀಲಾ! ... ಇಲ್ಲಿಯೇ ಇರುವೆಯಾ? ಜಲಪಾತದಲ್ಲಿ ಬೀಳುವುದೊಂದೇ ನನಗೆ ಗೊತ್ತಿತ್ತು. ಹುಲಿ ಮೇಲೆ ಹಾರಿದ ಹಾಗೇ ಅನಿಸಿತ್ತು. ಮತ್ತೆ ಹೇಗಿದ್ದೇನೋ? ಹುಲಿಯ ಶಬ್ದದಿಂದಲೇ ಎಚ್ಚರಿಕೆಯಾಯಿತಪ್ಪಾ!" ಎಂದು ಹೇಳು... ಮುಂದೆ ಬಂದನು.

"ಹೇಗೋ ಏನೋ ನನಗೂ ಗೊತ್ತಿಲ್ಲ... ನಾವಿಬ್ಬರೂ ಜೀವದೊಂದಿಗೆ ನಡೆದಾಡಿಕೊಂಡಿ...ವೆಂಬುದು ನಿಜ." ಎಂದು ಜಯಶೀಲನು, ದೂರದ ನೆಲದ ಮೇಲೆ ತೆವಳುತ್ತ, ಹೊರಳುತ್ತ, ... ವಿಕಾರ ಧ್ವನಿಯಿಂದ ನರಳುವ ಹುಲಿಯನ್ನು ನೋ... "ಆ ಹುಲಿಯನ್ನು ನೋಡಿದರೆ ಮರುಕ ಬರುತ್ತ... ಜಲಪಾತದೊಂದಿಗೆ ಕಲ್ಲಿನ ಮೇಲೆ ಬಿದ್ದು ಹುಲಿ... ಎರಡು ಕಾಲುಗಳು ಕೆಲಸಕ್ಕೆ ಬಾರದಂತಾಗಿ... ಇನ್ನು ಇದಕ್ಕೆ ಹೊಟ್ಟೆ ತುಂಬಿಸಿಕೊಳ್ಳುವ ... ಎಲ್ಲಿಯದು? ಹಸಿವೆಯಿಂದ ವಿಲವಿಲನೆ ಒದ... ಸಾಯುವುದಕ್ಕಿಂತ, ಈಗಲೇ ಸತ್ತುಬಿಡುವುದೆ... ಅದಕ್ಕೆ ಒಳ್ಳೆಯದು" ಎಂದು ಹೇಳಿ, ಕತ್ತಿ ತೆಗೆ... ಕೊಂಡು ಹುಲಿಯ ಕಡೆಗೆ ಹೋದನು.

ಆಗ ಸಿದ್ಧಸಾಧಕನು ಕಾಣದೆ ಹೋದ ತನ್ನ ... ವನ್ನು ನೆನೆದು ಅತ್ತಿತ್ತ ಹುಡುಕ ತೊಡಗಿದ... ಆ ಶೂಲ ಕೈಯಲ್ಲಿಲ್ಲದಿದ್ದರೆ ಅವನಿಗೆ ತಾನೇ ... ದಂತೆನಿಸುತಿತ್ತು. ಪುಣ್ಯವಶಾತ್ ಅದು ನೀರಿನ ... ಯಲ್ಲಿ ಸ್ವಲ್ಪ ಕೆಳಗಡೆಯಲ್ಲಿ ಅವನ ಕಣ್ಣಿಗೆ ಬಿ...

ಆಗ ತಾನೇ ಪೂರ್ಣ ಬದುಕಿದವನಂತೆ ಆ ಶೂಲ ವನ್ನೆತ್ತಿಕೊಂಡು ಉತ್ಸಾಹದಿಂದ ಜಯಶೀಲನಬಳಿಗೆ ಬಂದನು. ಆಗ ಜಯಶೀಲನು, ಅಸಹಾಯವಾಗಿ ಹೊರಳುತ್ತಿರುವ ಹುಲಿಯನ್ನೇ ತಲೆ ತಗ್ಗಿಸಿ ನೋಡುತ್ತ, "ಸಾಧಕಾ, ಈ ಹುಲಿ ನಮಗೆ ಯಾವ ಹಾನಿಯನ್ನೂ ಮಾಡಲಿಲ್ಲ. ಇದನ್ನು ಕೊಲ್ಲುವುದಕ್ಕೆ ನನಗೆ ಕೈಯೇ ಬರುವುದಿಲ್ಲ" ಎಂದನು.

"ಇತ್ತ ಕೊಡು" ಎಂದು ಸಿದ್ಧಸಾಧಕನು ಜಯ ಶೀಲನ ಕೈಯಿಂದ ಕತ್ತಿಯನ್ನು ತೆಗೆದುಕೊಂಡು, "ಜೀವದೊಂದಿಗೆ ನರಕಬಾಧೆ ಪಡುತ್ತಿರುವ ಈ ಹುಲಿಗೆ ಸಕಲ ಬಾಧೆಗಳನ್ನು ನಿವಾರಿಸುವುದು ಪುಣ್ಯ ಕಾರ್ಯವೇ. ಅದೊಂದು ಚಿಕಿತ್ಸೆಗೆ ಸಮಾನವೆಂದು ಕೊಂಡು ನಾನೇ ಆ ಕಾರ್ಯ ನೆರವೇರಿಸುತ್ತೇನೆ! ಮಹಾಕಾಳನೇ ರಕ್ಷ!" ಎನ್ನುತ್ತಾ ಕತ್ತಿಯ ಒಂದೇಟಿಗೆ ಹುಲಿಯ ತಲೆಯನ್ನು ಬೇರ್ಪಡಿಸಿದನು.

ಆಮೇಲೆ ಜಯಶೀಲನು ಸುತ್ತು ಮುತ್ತಲೂ ನೋಡಿದನು. ಅದು ಯಾವ ಪ್ರದೇಶ? ತಾವು ಯಾವ ದಿಕ್ಕಿಗೆ ಹೋಗಬೇಕು? ಹೇಳುವವರಾರು? ಸಾಧಕಾ, ನಿನಗೇನು ತೋರುತ್ತದೆ? ಈಗ ನಾವು ಯಾವ ದಿಕ್ಕಿಗೆ ಪ್ರಯಾಣ ಮಾಡಬೇಕು? ಕನಕಾಕ್ಷ ಮಹಾರಾಜರ ಮಕ್ಕಳನ್ನು ಅಪಹರಿಸಿಕೊಂಡು ಹೋದವನೊಬ್ಬ ನಮ್ಮ ಕೈಗೆ ಸಿಕ್ಕಿಯೂ, ತಪ್ಪಿಸಿ ಕೊಂಡು ಹೋಗಿಬಿಟ್ಟ. ಅವನನ್ನು ಬಿಡಬಾರದಿತ್ತು. ನಾವೇ ಅವನ ಕೈಗೆ ಸಿಕ್ಕಿ ಎಂಥಾ ಪೇಚಾಟಕ್ಕಿಟ್ಟು ಕೊಂಡಿತು!" ಎಂದ ಜಯಶೀಲ.

"ಜಯಶೀಲಾ, ಅವನನ್ನು ನಾವು ಬಿಟ್ಟುಬಿಟ್ಟೆವೋ, ಅವನೇ ನಮ್ಮಿಂದ ಬಿಡುಗಡೆ ಹೊಂದಿ ತಪ್ಪಿಸಿ ಕೊಂಡನೋ ಹೇಳುವುದು ಕಷ್ಟ. ಆ ಜಲಗ್ರಹ ದೊಂದಿಗೆ ನಾವಾದರೂ ಎಷ್ಟುಕಾಲ ಅವನನ್ನಂಟಿ ಕೊಂಡು ಬದುಕಿರಬಲ್ಲೆವು? ನಾವೀಗ ಆಲೋಚನೆ ಮಾಡಬೇಕಾದುದು ನಡೆದುಹೋದ ವಿಷಯವನ್ನು



ಕುರಿತು ಅಲ್ಲ; ನಾವು ಎಂತಹ ಸ್ಥಳಕ್ಕೆ ಬಂದು ಸೇರಿದ್ದೇವೆ? ಈ ಪ್ರಾಂತದಲ್ಲಿ ಎಲ್ಲಿಯಾದರೂ ಮಾನವರಾರಾದರೂ ಇದ್ದಾರೆಯೆ? ಇದನ್ನು ಮೊದಲು ತಿಳಿದುಕೊಳ್ಳಬೇಕು" ಎಂದ ಸಿದ್ಧಸಾಧಕ.

ಅವನ ಮಾತಿಗೆ ಪ್ರತ್ಯುತ್ತರ ಬರುತ್ತಿದೆಯೇನೋ ಎಂಬಂತೆ, ನದಿಯ ಕೆಳಭಾಗದಲ್ಲಿರುವ ದಟ್ಟವಾದ ಮರಗಳ ಗುಂಪಿನೆಡೆಯಿಂದ, ಮನಷ್ಯ ಕಂಠದಿಂದ ಹೊರಟ, ಸಾಯುವವನ ಕೂಗೊಂದು ಕಿವಿಗೆ ಅಪ್ಪಳಿಸಿತು. ಅದರೊಂದಿಗೆ ಯಾವುದೋ ಬೆಟ್ಟದ ಕುರಿಯ ವಿಕಾರ ಕಂಠ ಸ್ವರವೂ ಹೊರಟಿತು! ಆ ಕಡೆಗೆ ನೋಡುತ್ತ ಇಬ್ಬರೂ ಸ್ತಬ್ಧರಾಗಿ ನಿಂತರು.

"ಕಾಡು ಕುರಿಯನ್ನು ಮನುಷ್ಯ ಹಿಡಿದನೋ, ಕಾಡುಟಗರೇ ಮನುಷ್ಯನನ್ನು ಹಿಡಿದಿದೆಯೋ?" ಎಂದ ಸಿದ್ಧಸಾಧಕ.

"ಆ ಇಬ್ಬರನ್ನೂ ಮತ್ತಾವುದೋ ಕ್ರೂರ ಮೃಗ ಹಿಡಿದಿದ್ದರೂ ಇದ್ದೀತು. ಆ ಕಾಡಿನೊಳಗೆ ಏನು



ಭಯಂಕರವಿದೆಯೋ ? ನೋಡಿಬಿಡೋಣ ಬಾ. ಏನೂ ತೋರದಿರುವ ನಮ್ಮ ಬುದ್ಧಿಗೆ ಸ್ವಲ್ಪ ಚುರುಕಾದರೂ ಬಂದೀತು" ಎನ್ನುತ್ತಾ ಜಯಶೀಲ ನದಿಯ ಕೆಳ ಭಾಗದ ಆ ಕಾಡಿನಕಡೆಗೆ ಓಡ ತೊಡಗಿದ.

ಜಯಶೀಲನೂ ಸಿದ್ಧಸಾಧಕನೂ ಅಲ್ಲಿಗೆ ಹೋಗಿ ನೋಡಲು, ಭಯಂಕರವಾದೊಂದು ಅದ್ಭುತ ದೃಶ್ಯ ಅವರ ಮುಂದೆ ಕಂಡಿತು. ನೀರ ಬದಿಯಲ್ಲಿದ್ದ ದೊಡ್ಡದೊಂದು ಕೊಂಬೆಗೆ ಸಿಕ್ಕಿಕೊಂಡು ಒಂದು ಟಗರೂ, ಮತ್ತೊಬ್ಬ ಕುಳ್ಳ ಜಾತಿಯ ಮನುಷ್ಯನೂ ಪಟಪಟ ಕೈಕಾಲಾಡಿಸುತ್ತ ನೇತಾಡಿಕೊಂಡಿದ್ದರು. ಆ ಮರದ ಕೊಂಬೆಗಳಲ್ಲಿ ಚಿಕ್ಕ ಚಿಕ್ಕ ಎಲೆಗಳೇ ಇದ್ದುದರಿಂದ ಅದೊಂದು ಬೋಳು ದೈತ್ಯ ಮರದಂತೆ ಕಾಣುತಿತ್ತು.

"ಇದೇನು ವಿಚಿತ್ರ ! ಕೊಂಬೆಯಲ್ಲಿ ಬೇರೆ ಯಾವ ಪ್ರಾಣಿಯೂ ಇಲ್ಲ. ಟಗರನ್ನೂ ಆ ಕುಳ್ಳನನ್ನೂ ಮೇಲಕ್ಕೆ ಎಳೆಯುತ್ತಿರುವವರು ಯಾರು ? ಯಾರೂ ಎಳೆಯದೆ ಕೊಂಬೆ ತನ್ನಂತೆ ತಾನೇ ಮೇಲೆ ಮೇಲೆ ಹೋಗುತ್ತಿದೆಯಲ್ಲಾ ?" ಎಂದ ಜಯಶೀಲ.

"ಇದು ಯಾವುದೋ ಅದೃಶ್ಯ ಪಿಶಾಚಿಯ ಕೆಲಸ. ನಾನು ಮಂತ್ರದಿಂದ ಅದನ್ನು ಕಂಡುಹಿಡಿದು ಶೂಲದಿಂದ ಅದರ ಗುಂಡಿಗೆಯನ್ನು ಸೀಳಿಬಿಡುತ್ತೇನೆ" ಎಂದು ಸಿದ್ಧಸಾಧಕನು ಆ ಮರದ ಅಡಿಗೆ ಹೋಗಿ ಶೂಲವನ್ನೆತ್ತಿ ಏನೋ ಮಂತ್ರೋಚ್ಚಾರಕ್ಕಾಗಿ ಬಾಯಿ ತೆರೆಯುವಷ್ಟರಲ್ಲಿ, ಮರದ ಮತ್ತೊಂದು ಕೊಂಬೆ ಸೊಯ್ಯನೆ ಬಾಗಿಬಂದು ಅವನ ಭುಜವನ್ನು ಬಳಸಿತು.

ಯಾವನೋ ಬಲಿಷ್ಠನೊಬ್ಬ ತನ್ನ ಭುಜವನ್ನು ಹಿಡಿದು ಮೇಲಕ್ಕೆ ಎತ್ತುತ್ತಿರುವಂತೆ ಅನುಭವವಾಗಿ ತೋರಲು, ಸಿದ್ಧಸಾಧಕನು ನುಸುಳಿ ಈಚೆಗೆ ಹಾರಿ, "ಓಹ್! ಜಯಶೀಲಾ! ಇದು ಯಾವುದೋ ರಾಕ್ಷಸ ವೃಕ್ಷ. ಅಥವಾ ಭೂತ ವೃಕ್ಷ." ಎಂದನು. ತನ್ನ ಮಂತ್ರವು ಪ್ರಯೋಜನವಿಲ್ಲವೆಂದು ಅವನ ಭಾವನೆಯಿಂದ ಗೊತ್ತಾಯಿತು.

"ಇದು ಎಂತಹ ಮರವೆಂದು ಈವರೆಗೂ ನಾನು ಕಂಡಿಲ್ಲ. ಒಂದು ವಿಷಯ ಕೇಳಿದ್ದು ನೆನಪಿಗೆ ಬರುತ್ತದೆ. ಇದು ತನ್ನ ಎಟುಕಿನೊಳಗೆ ಬಂದ ಮನುಷ್ಯರನ್ನೂ ಪ್ರಾಣಿಗಳನ್ನೂ ಹಿಡಿದು ಎತ್ತಿ ಸಾರ ಹೀರಿ ಕೊಲ್ಲುವ ಮರವೆಂಬುದು ನಿಜ. ಅಂತಹ ಮರವೂ ಇದೆಯಂತೆ" ಎಂದು ಜಯಶೀಲನು, ದೂರ ನಿಂತು ಹಾರಿ ಹಾರಿ ಕತ್ತಿಯನ್ನು ಬೀಸಿ, ಕುಳ್ಳನನ್ನೂ, ಟಗರನ್ನೂ ಹಿಡಿದಿದ್ದ ಕೊಂಬೆಯನ್ನು ತುಂಡು ಮಾಡಿಬಿಟ್ಟನು. ಕೂಡಲೇ ಆ ಕೊಂಬೆಗೆ ನೇತಾಡುತ್ತಿದ್ದ ಇಬ್ಬರೂ ಕೆಳಗಿದ್ದ ನೀರಿನೊಳಗೆ ಬಿದ್ದರು.

ಜಯಶೀಲ ಸಿದ್ಧಸಾಧಕರು ಲಗುಬಗೆಯಿಂದ ಹೋಗಿ ನೀರಿನಲ್ಲಿ ಬಿದ್ದ ಕುಳ್ಳನನ್ನು ಮೇಲಕ್ಕೆ ಎಳೆದು ತಂದರು. ಟಗರು ಈಜಿ ತೀರದಲ್ಲಿರುವ ಬಂಡೆಯ ಮೇಲೇರಿ, ಮೈ ಕೊಡರಿಕೊಂಡು ತಲೆಯೆತ್ತಿ ದೊಡ್ಡ ದನಿಯಿಂದ ಕೂಗಿತು, ಬದುಕಿದೆನೆಂಬ ಸಂತೋಷದಿಂದ.

"ಜಯಶೀಲಾ, ಇದು ಸಾಧಾರಣ ಟಗರಿನಂತಿಲ್ಲ. ದಕ್ಕೆ ಸವಾರಿಯ ಕುದುರೆಗಿರುವ ಹಾಗೆ ಜೀನು ಡಿವಾಣ ಎಲ್ಲಾ ಇವೆ. ಇದೊಂದು ಆಶ್ಚರ್ಯ ಲ್ಲವೇ ?" ಎಂದ ಸಿದ್ಧಸಾಧಕ.

"ಇಲ್ಲಿಯದು ಎಲ್ಲವೂ ಆಶ್ಚರ್ಯವೇ ! ನಾನು ಗಲೇ ಅದನ್ನು ನೋಡಿದ್ದೇನೆ ಬಿಡು" ಎಂದ ಯಶೀಲ.

ಮೊದಲು ಮರದಕೊಂಬೆಯಲ್ಲಿ ಸಾವಿನ ಭಯ ಂದ, ಆಮೇಲೆ ನೀರಿನ ಭಯದಿಂದ ಬಿಡುಗಡೆ ಹೊಂದಿ ಮೇಲೆದ್ದರೂ, ನೆನೆದು ಗಡಗಡ ನಡುಗು ರುವ ಕುಳ್ಳನು, ಜಯಶೀಲ ಸಿದ್ಧಸಾಧಕರನ್ನು ಟ್ಟ ಕಣ್ಣುಗಳಿಂದ ನೋಡುತ್ತ, ಕೈಮುಗಿದು, "ಅಯ್ಯಾ, ಒಬ್ಬ ಸೇನಾನಾಯಕನನ್ನು ನರಭಕ್ಷಕ ಕ್ಷದಿಂದ ಕಾಪಾಡಿದುದಕ್ಕೆ ಗಡೇಕಾರಿ ರಾಣಿ ತಮಗೆ ಳ್ಳೆಯ ಬಹುಮಾನ ಕೊಡುತ್ತಾಳೆ. ನೀವು ಮಹಾ ಣಿಯ ಅಭಿಮಾನಕ್ಕೆ ಪಾತ್ರರಾದಿರಿ" ಎಂದನು.

ಜಯಶೀಲನು ಅವನನ್ನು ಆಶ್ಚರ್ಯದಿಂದ ನೋಡುತ್ತ, "ಏನು, ಏನಂದೆ? ಈ ಪ್ರಾಂತಕ್ಕೆ ಬ್ಬಳು ರಾಣಿ, ಆ ರಾಣಿಗೆ ಸೈನಿಕರು, ಆ ಸೈನಿಕರಿಗೆ ನ್ನಂಥ ಅಂಗುಷ್ಠ ಸೇನಾನಾಯಕನೂ ಇದ್ದಾ ಂದಾಯಿತು ! ಭೇಷ್ ! ಭೇಷ್ !" ಎಂದನು.

"ಎಲ್ಲಕ್ಕಿಂತಲೂ ವಿಚಿತ್ರ, ಪ್ರಾಣಿಗಳನ್ನು ತಿನ್ನುವ ಮರ. ಇಂತಹ ಮರವು ಎಲ್ಲೋ ಇದೆಯೆಂದು ಳಿದ್ದೇವೆಯೇ ಹೊರತು ನೋಡುವುದು ಇದೇ ಮೊದಲು. ಚೆನ್ನಾಗಿಯೇ ನೋಡಿಬಿಡೋಣ" ಂದು ಹೇಳುತ್ತ ಸಿದ್ಧಸಾಧಕನು, ಮರದ ಹಿಂದಿನ ದಿಗೆ ಹೋಗಿ ಗಟ್ಟಿಯಾಗಿ ಚಪ್ಪಾಳೆ ತಟ್ಟುತ್ತ, "ಓಹೋ ! ಜಯಶೀಲಾ ! ಈ ರಾಕ್ಷಸೀ ವೃಕ್ಷದ್ದು ಧಾರಣ ಹಸಿವೆಯಲ್ಲವಪ್ಪಾ ! ಕುಂಭಕರ್ಣನ ವೆ ! ಇಲ್ಲಿಗೆ ಬಂದು ನೋಡು ! ಎಷ್ಟು ಪ್ರಾಣಿಗಳ, ನವ ತಲೆಬುರುಡೆಗಳ ರಾಶಿ ಇದೆ ! ಸಾರ ಹೀರಿ



ಎಲ್ಲಾ ಆದ ಮೇಲೆ ಹಿಪ್ಪೆಯನ್ನು ಹೀಗೆ ಕೆಳಗೆ ಹಾಕುತ್ತದೆಂದು ಕಾಣುತ್ತದೆ !" ಎಂದನು.

ಜಯಶೀಲನು ಸಿದ್ಧಸಾಧಕನಬಳಿಗೆ ಹೋಗಿ ನೋಡಿದನು. ಕೆಳಗಿನ ಹಳ್ಳದಲ್ಲಿ ಪೊದೆಗಳ ನಡುವೆ ಹಾಗು ಅತ್ತಿತ್ತ ಚೆಲ್ಲಾಚೆದರಾಗಿ ಬಿದ್ದಿರುವ ಎಲುವು ಗಳನ್ನೂ ಕಂಕಾಳಗಳನ್ನೂ ನೋಡಿದನು. ಹಾಗೆ ನೋಡುತ್ತಾ ಆ ಮರದ ಕೊಂಬೆಯ ಬುಡಕ್ಕೆ ಬಂದಾಗ, ಕೆಳಗಿನ ಕೊಂಬೆಯೊಂದು ಜೊಯ್ಯನೆ ಬಾಗಿಬಂದು ಅವನನ್ನು ಹಿಡಿಯಲು ನೋಡಿತು. ಜಯಶೀಲನು ತಟಕ್ಕನೆ ದೂರ ಹಾರಿ ಆ ಮರದ ಕಡೆಗೆ ತಿರುಗಿ ಸುಮ್ಮನೆ ನೋಡತೊಡಗಿದನು.

ಆ ಕುಳ್ಳ ಸೇನಾಪತಿ, ತನ್ನ ವಾಹನವಾದ ಟಗರಿನ ಬಳಿಗೆ ಹೋಗಿ, ಅದರ ಬೆನ್ನುತಟ್ಟಿ, ಕಡಿವಾಣ ವನ್ನು ಹಿಡಿದು ನಡೆಯಿಸಿಕೊಂಡು, ಜಯಶೀಲನ ಬಳಿಗೆ ಬಂದು, "ಅಯ್ಯಾ, ನನ್ನನ್ನು ಪ್ರಾಣಾಪಾಯ ದಿಂದ ಕಾಪಾಡಿ ಗಡೇಕಾರೀಜಾತಿಗೆ ಎಂದೆಂದೂ



ಮರೆಯಲಾರದ ಉಪಕಾರ ಮಾಡಿದಿರಿ. ಬನ್ನಿ, ನಮ್ಮ ರಾಣಿಯ ದರ್ಶನಕ್ಕೆ ಹೋಗೋಣ'' ಎಂದು ಇಬ್ಬರನ್ನೂ ಕರೆದನು.

ಆ ಮಾತುಗಳಿಗೆ ಸಾಧಕನು ಗಟ್ಟಿಯಾಗಿ ನಗುತ್ತ, ''ಎಂಥ ಮಹಾಸೇನಾಧಿಪತಿಯೋ! ಪ್ರಾಣಕ್ಕೆ ಅಪಾಯವೆಂದು ತಿಳಿದಿದ್ದೂ, ಆ ಮರದಿಂದ ಜೀವ ಉಳಿಸಿಕೊಳ್ಳಲು ನಿನಗೂ ಆಗಲಿಲ್ಲ, ನಿನ್ನ ಮಹಾ ಕುದುರೆಯಂಥ ಟಗರಿಗೂ ಆಗಲಿಲ್ಲ. ಇನ್ನು ನಿನ್ನ ರಾಣೀದೇವಿ ನಮಗೇನು ತಾನೇ ಬಹುಮಾನ ಕೊಟ್ಟಾಳು? ಬಹುಶಃ ಒಂದಿಷ್ಟು ಗೆಣಸುಗಡ್ಡೆಯನ್ನೂ, ಬಿದಿರಕ್ಕಿಯನ್ನೂ ಕೊಡುವಳೇನೋ? ಸುಮ್ಮನೆ ನಿನ್ನ ದಾರಿ ಹಿಡಿದು ಹೋಗಪ್ಪ; ನಮ್ಮ ದಾರಿ ಹಿಡಿದು ನಾವೂ ಹೋಗುತ್ತೇವೆ'' ಎಂದನು.

ಅವನ ಅವಹೇಳನೆಯ ಮಾತುಗಳಿಗೆ ಕುಳ್ಳ ಸೇನಾಪತಿ ಮುಖಬಾಡಿಸಿಕೊಂಡು ಏನೂ ತೋರದೆ ದಿಕ್ಕುದಿಕ್ಕು ನೋಡತೊಡಗಿದ. ಇಷ್ಟು ದೊಡ್ಡ ಉಪಕಾರ ಮಾಡಿದವರಿಗೆ ಏನೂ ಪ್ರತಿಫಲ ಕೊ…ಸದೆ ಸುಮ್ಮನಿರಲು ಅವನಿಗಾಗಲಿಲ್ಲವೇನೋ! ಅಷ್ಟರಲ್ಲಿ ಮರಗಳ ಆಚೆಯ ಬದಿಯಲ್ಲಿ ಏನೋ ಕಲಕಲರವ ಹೊರಡತೊಡಗಿತು. ಜಯಶೀಲನೂ ಸಿದ್ಧಸಾಧಕನೂ ಆ ಧ್ವನಿ ಕೇಳಿ ಬರುವ ಕಡೆಗೆ ತಿರುಗಿ ನಿಂತರು. ಬರಬರುತ್ತ ಧ್ವನಿ ಸಮೀಪವಾಗುತ್ತಿದ್ದಿತು.

ಎರಡು ಟಗರುಗಳನ್ನು ಹೂಡಿದ ರಥದ ಮೇಲೆ ಒಂದು ಕುಳ್ಳ ಸ್ತ್ರೀವ್ಯಕ್ತಿ ಕುಳಿತಿರುವುದನ್ನು ನೋಡಿದರು. ಅವಳ ವೇಷಭೂಷಣಗಳು ವಿಚಿತ್ರವಾಗಿದ್ದುವು. ಅವಳು ಜಿಂಕೆಯ ಚರ್ಮವನ್ನು ಧರಿಸಿದ್ದಳು. ಕೊಕ್ಕರೆ ಮತ್ತು ನವಿಲುಗಳ ಗರಿಗಳಿಂದ ಹೊಲಿದು ಮಾಡಲ್ಪಟ್ಟ ಕಿರೀಟವನ್ನು ತಲೆಯಲ್ಲಿ ಇರಿಸಿಕೊಂಡಿದ್ದಳು. ಆ ರಥದ ಹಿಂದೆಯೂ ಅಕ್ಕಪಕ್ಕಗಳಲ್ಲಿಯೂ ಟಗರುಗಳನ್ನೇರಿಕೊಂಡು ಕೈಯಲ್ಲಿ ಭಲ್ಲೆಗಳನ್ನು ಹಿಡಿದುಕೊಂಡ ಅನೇಕ ಮಂದಿ ಕುಳ್ಳರಿದ್ದರು. ಅವರೆಲ್ಲರೂ ''ಮಹಾರಾಣಿಗೆ ಜಯ! ಗಡೇಕಾರೀ ರಾಣೀದೇವಿಗೆ ಜಯ!'' ಎಂದು ಒಂದೇ ಲಯದಲ್ಲಿ ಘೋಷಿಸಿಕೊಂಡು ಬರುತ್ತಿದ್ದರು.

ಅವರನ್ನು ನೋಡಿ ಕುಳ್ಳಸೇನಾಪತಿ ಮುಂದೆ ಹೋಗಿ, ''ಜಯ ಮಹಾರಾಣೀದೇವೀ'' ಎಂದು ಬಗ್ಗಿ ರಾಣಿಗೆ ನಮಸ್ಕಾರ ಮಾಡಿದನು. ಅವನೇ ಜಯಶೀಲ, ಸಿದ್ಧಸಾಧಕರನ್ನು ಅವಳಿಗೆ ತೋರಿಸಿ ''ಇವರು ನನ್ನನ್ನು ನರಭಕ್ಷಕ ವೃಕ್ಷದ ಹಿಡಿತದಿಂದ ಕಾಪಾಡಿದರು'' ಎಂದು ಅರಿಕೆ ಮಾಡಿದನು.

ಕುಳ್ಳರ ರಾಣಿ ತನ್ನ ರಥವನ್ನು ಜಯಶೀಲನ ಮುಂದೆ ನಿಲ್ಲಿಸಿ, ''ಓ, ಮಹಾಕಾಯರಾದ ಮಹಾನುಭಾವರುಗಳೇ! ನೀವೇ ರಾತ್ರಿಯಲ್ಲಿ ನನ್ನ ಕನಸಿನಲ್ಲಿ ಬಂದವರು. ನಮ್ಮನ್ನು ಹೆದರಿಸುವ ಶತ್ರುಗಳಿಂದ ನಮ್ಮನ್ನು ಕಾಪಾಡುವವೆಂದು ನನಗೆ ಭರವಸೆಕೊಟ್ಟವರು ನೀವಿಬ್ಬರೂ! ಹೇಳಿದ ಹಾಗೇ ಬಂದಿದ್ದೀರಿ. ನಿಮಗೆ ನಮಸ್ಕಾರ'' ಎಂದಳು.

ಸಿದ್ಧಸಾಧಕನು ಜಯಶೀಲನ ಕಿವಿಯಲ್ಲಿ "ಈ ಕಳ್ಳರಾಣಿ ನಮ್ಮ ಮೇಲೇನೋ ಗಾಳಹಾಕುವ ಹಾಗಿದೆ!" ಎಂದ ಪಿಸುದನಿಯಿಂದ.

"ಬಹಳ ಮಾತಿನ ಮಲ್ಲಿಯು ಹಾಗಿದ್ದಾಳೆ. ಪಾಪ, ಈ ಕುಳ್ಳ ಮನುಷ್ಯರಿಗೆ ಯಾರಿಂದಲೋ ಏನೋ ಅಪಾಯ ಬರುವ ಹಾಗಿದೆ. ವಿಚಾರಿಸೋಣ. ನಮ್ಮಿಂದಾದರೆ ಸಹಾಯ ಮಾಡೋಣ. ಒಳಿತು ಮಾಡಿದುದರ ಫಲ ಸುಮ್ಮನೆ ಹೋಗಲಾರದು" ಎಂದು ಮೆಲ್ಲನೆ ಜಯಶೀಲನು ಹೇಳಲು, ಅದು ಸಿದ್ಧಸಾಧಕನಿಗೆ ಹಿಡಿಸಲಿಲ್ಲ. ಅವನು ಮುಖವನ್ನು ಸೊಟ್ಟಗೆ ಮಾಡಿ, "ಜಯಶೀಲಾ, ನಾವು ಒಂದು ಮಹೋನ್ನತವಾದ ಕಾರ್ಯವನ್ನು ಸಾಧಿಸಲಿಕ್ಕಾಗಿ ಹೊರಟು ಬಂದವರು. ಆ ಸಮಾಚಾರವನ್ನು ಮರೆತು ಈ ಸಣ್ಣ ಸಣ್ಣ ಪುಡಿಗಾಳುಗಳನ್ನು ಹೆಕ್ಕುವ ಸಕ್ಕೆ ಬೀಳುವುದುಂಟೇ?" ಎಂದನು.

"ಸಾಧಕಾ, ಕನಕಾಕ್ಷ ಮಹಾರಾಜರ ಮಕ್ಕಳ ಪ್ರಾಣಗಳಂತಹುದೇ ಈ ಕುಳ್ಳಜಾತಿಯವರ ಪ್ರಾಣಗಳೂ ಎಂಬುದನ್ನು ಮರೆಯಬೇಡ. ಪ್ರಾಣವೆಂದರೆ ರಾಕ್ಷಸನಿಗೂ ಮನುಷ್ಯ ಮೊದಲಾದ ಸಣ್ಣಪುಟ್ಟ ಪ್ರಾಣಿಗಳಿಗೂ ಒಂದೇವಿಧ ಗೊತ್ತೆ? ಈಗ ಇವರಿಗೆ ಯಾರಿಂದ ಏನು ಕಷ್ಟ ಬರುತ್ತದೆಂಬುದನ್ನು ವಿಚಾರಿಸಿ ಕೈಲಾದ ಸಹಾಯಮಾಡುವುದೇ ನಿಜವಾದ ಮನುಷ್ಯ ಧರ್ಮ" ಎಂದ ಜಯಶೀಲ.

ಜಯಶೀಲನ ಮಾತು ಮುಗಿಯುವುದರೊಳಗೆ ಪಕ್ಕದಲ್ಲಿದ್ದೊಂದು ಗುಡ್ಡದ ದಿಣ್ಣೆಯ ಮೇಲಿನಿಂದ ಭೀತಾವಹವಾದ ಗರ್ಜನೆಯೊಂದು ಹೊರಟಿತು. ಎಲ್ಲರೂ ಆ ಕಡೆಗೆ ನೋಡಿದರು. ಅಲ್ಲೊಂದು ರಾಕ್ಷಸಾಕಾರವೇ ನಿಂತಿತ್ತು, ಸುಮಾರು ಹನ್ನೆರಡಡಿ ಎತ್ತರವಾದ ಶರೀರ. ಅದು ತನ್ನ ಎರಡು ಕೈಗಳಲ್ಲಿಯೂ ಒಂದು ದೊಡ್ಡ ಬಂಡೆಗಲ್ಲನ್ನು ಎತ್ತಿ ಬಿಸುಡಲು ಸಿದ್ಧವಾಗಿ ನಿಂತಿತ್ತು. ಅದರ ನಡುವಿಗೆ ಕಟ್ಟಿದ ಬಲವಾದ ಕಬ್ಬಿಣದ ಸಂಕಲೆಯನ್ನು ಒಬ್ಬ ಮನುಷ್ಯನು ಹಿಡಿದಿದ್ದನು. ಅವನ ಇನ್ನೊಂದು ಕೈಯಲ್ಲಿ ಕತ್ತಿ ಇದ್ದಿತು. ಅವನನ್ನೂ, ಅವನು ಹಿಡಿದಿದ್ದ



ವಿಕೃತಾಕಾರವನ್ನೂ ನೋಡಿ, ಕುಳ್ಳ ರಾಣಿಯೂ ಇತರ ಕುಳ್ಳ ಸಮುದಾಯವೂ ಒಣಗಿದ ತರಗೆಲೆಗಳಂತೆ ನಡುಗ ತೊಡಗಿದರು. ಅಷ್ಟರಲ್ಲಿ ಕತ್ತಿಯವನು ವಿಕೃತಾಕಾರದ ಬೆನ್ನಿನಲ್ಲಿ ಕತ್ತಿಯಿಂದ ಗೀರಿದನು. ಆಗ ಆ ವಿಕೃತಾಕಾರವು ಕಲ್ಲನ್ನು ಹಾಗೇ ಎತ್ತಿಕೊಂಡು ಆಚೆಗೂ ಈಚೆಗೂ ಹಾರಾಡತೊಡಗಿತು.

ಅದನ್ನು ನೋಡಿ ಜಯಶೀಲನು ಸಿದ್ಧಸಾಧಕನೊಂದಿಗೆ, "ನೋಡಿದೆಯಾ ಸಾಧಕಾ, ಆ ಭಯಂಕರ ದೈತ್ಯಾಕಾರದ ಪ್ರಾಣಿಯನ್ನು ಪಳಗಿಸಿ ಆಡಿಸುವವನು ಕುಳ್ಳ ಜಾತಿಯವನಲ್ಲ. ನಮ್ಮ ಹಾಗಿನ ಮನುಷ್ಯನೇ. ಆ ಪ್ರಾಣಿ ಎಂಥದಿರಬಹುದು ?" ಎಂದನು. ಸಿದ್ಧಸಾಧಕನೂ ತಿಳಿಯದೆಂಬಂತೆ ತಲೆ ಆಡಿಸುತ್ತಾ ಅದನ್ನೇ ನೋಡುತ್ತಿದ್ದನು.

ಜಯಶೀಲನು ಕುಳ್ಳರ ರಾಣಿಯನ್ನು ಕುರಿತು, "ಓ ರಾಣಿಯೇ, ನಿಮಗೇನೋ ಶತ್ರುಗಳ ಕಾಟವಿರುವುದೆಂದು ಹೇಳಿದೆಯಲ್ಲಾ ? ಆ ಶತ್ರುಗಳು ಈ ಭಯಂಕರ ಪ್ರಾಣಿಯೂ ಅದನ್ನಾಡಿಸುವ ಆ ಕತ್ತಿ ಹಿಡಿದ ಮನುಷ್ಯನೂ ಅಂತ ಕಾಣುತ್ತದೆ, ಹೌದೇ? " ಎಂದು ಕೇಳಿದ.

ಕುಳ್ಳರ ರಾಣಿ ಅದಕ್ಕೇನೂ ಉತ್ತರ ಕೊಡದೆ, ಭಯವನ್ನು ಬಿಟ್ಟು ರಥದಿಂದ ಕೆಳಗಿಳಿದು ಜಯಶೀಲ, ಸಿದ್ಧಸಾಧಕರ ಮುಂದೆ ಬಂದು, "ಮಹಾನುಭಾವರೇ, ನಮ್ಮನ್ನು ಕಾಡಿಸುವ ಶತ್ರುಗಳು ಇವರಲ್ಲ; ಬೆಟ್ಟದ ಆಚೆಗಿರುವ ನಮ್ಮಂತಹ ಕುಳ್ಳ ಜಾತಿಯವರೇ. ಅವರು ತಾವು ಯಕ್ಷರಿಂದ ಉದ್ಭವಿಸಿದ ಯಾಕ್ಷಿಕರೆಂದು, ನಮಗಿಂತ ಹೆಚ್ಚಿನವರೆಂದು ಅಹಂಕಾರವಿಟ್ಟುಕೊಂಡು ನಮ್ಮನ್ನು ನಾಶಮಾಡಲು ಕಂಕಣ ಕಟ್ಟಿಕೊಂಡಿದ್ದಾರೆ !" ಎಂದಳು.

"ಹಾಗಾದರೆ ಆ ದೈತ್ಯಾಕಾರದ ಪ್ರಾಣಿಯನ್ನು ಇಷ್ಟಬಂದಂತೆ ಆಡಿಸುವವರು ಎಂದೋ ನಿಮ್ಮನ್ನು ಬಗ್ಗಿಸಬೇಕಿತ್ತು. ಇವರಿಗೂ ಅವರಿಗೂ ಸಂಬಂಧವು ಇಲ್ಲವೇನು ? " ಎಂದು ಕೇಳಿದ ಸಿದ್ಧಸಾಧಕ.

"ಮಹಾಕಾಯದ ವೀರರೇ. ಆ ಭಯಂಕರ ಪ್ರಾಣಿ ನರವಾನರ ಜಾತಿಯದು. ಅದರಿಂದ ನಮ್ಮ ಮೇಲೆ ಕಲ್ಲುಬಂಡೆ ಬೀಸಿಸುವವನು ನಿಮ್ಮಂತಹ ಮನುಷ್ಯ. ಇವರಿಬ್ಬರೂ ಹನ್ನೆರಡು ದಿನಗಳ ಹಿಂದೆ ಬಂದು ನಮ್ಮ ಆ ಶತ್ರುಗಳೊಂದಿಗೆ ಸೇರಿದ್ದಾರೆ. ಅದೇ ನಮಗೀಗ ಬಂದಿರುವ ದೊಡ್ಡ ಕುತ್ತು!" ಎಂದಳು ಕುಳ್ಳರ ರಾಣಿ.

ರಾಣಿಯ ಮಾತು ಮುಗಿಯುವಷ್ಟರಲ್ಲಿ ನರವಾನರವು ಪ್ರಳಯ ಭಯಂಕರ ಧ್ವನಿಯಿಂದ ಅರಚಿ, ಕೈಯಲ್ಲಿ ಹಿಡಿದಿದ್ದ ದೊಡ್ಡ ಬಂಡೆಗಲ್ಲನ್ನು ಗುಡ್ಡದ ಮೇಲಿನಿಂದ ಕುಳ್ಳ ಜಾತಿಯವರ ಮೇಲೆ ಒಗೆದು ಹಾಕಿತು.

(ಮುಂದುವರಿಯುವುದು)





February 1977

# ವೀರಹನುಮಾನ್

ಜಾಂಬವಂತನು ಹೇಳಿದ ಗುರುತುಗಳನ್ನು ನೆನಪಿಟ್ಟುಕೊಂಡು ಹನುಮಂತನು ಓಷಧೀ ಪರ್ವತದಲ್ಲಿ ತನಗೆ ಬೇಕಾದ ನಾಲ್ಕು ಔಷಧದ ಗಿಡಗಳನ್ನು ಹುಡುಕ ತೊಡಗಿದನು. ಅಲ್ಲಿರುವ ಎಲ್ಲಾ ಗಿಡಗಳೂ ಒಂದೇ ಬಗೆಯಾಗಿ ಕಂಡುಬಂದುವು. ಹನುಮಂತನು ರೇಗಿ ತಾಳ್ಮೆಗೆಟ್ಟು ಆ ಪರ್ವತ ಶಿಖರವನ್ನೇ ಗುದ್ದಿ ಎಬ್ಬಿಸಿ ಹೊತ್ತುಕೊಂಡು ಹಿಂದಿರುಗಿದನು.

ದೊಡ್ಡ ಬೆಟ್ಟದೊಂದಿಗೆ ಆಕಾಶದಲ್ಲಿ ಬರುತ್ತಿರುವ ಹನುಮಂತನನ್ನು ನೋಡಿ ಎಚ್ಚರದಲ್ಲಿದ್ದ ಕೆಲವೇ ಮಂದಿ ವಾನರರು ಹರ್ಷಾತಿರೇಕದಿಂದ ಗರ್ಜಿಸಿದರು. ಅದನ್ನು ಕೇಳಿ ಹನುಮಂತನು ಕೂಡಾ ಪ್ರತಿಯಾಗಿ ಗರ್ಜನೆ ಮಾಡಿದನು. ಅವನು ಕೆಳಗಿಳಿದು ಬೆಟ್ಟವನ್ನು ಕೆಳಗಿಟ್ಟು, ಜಾಂಬವಂತ ಮೊದಲಾದ ಹಿರಿಯರಿಗೆ ನಮಸ್ಕಾರ ಮಾಡಿದನು.

ಔಷಧ ಮೂಲಿಕೆಗಳ ಮೇಲಿನಿಂದ ಹೊರಟು ಬಂದ ಗಾಳಿಯಿಂದಲೇ ರಾಮಲಕ್ಷ್ಮಣರು ಮೂರ್ಛೆಯಿಂದ ಎಚ್ಚರಕ್ಕೆ ಬಂದರು. ಅದರಂತೆ ಉಳಿದೆಲ್ಲರಿಗೂ ಎಚ್ಚರವಾಯಿತು. ಅಷ್ಟುಮಾತ್ರವಲ್ಲದೆ ಸತ್ತು ಬಿದ್ದಿದ್ದ ಇನ್ನೆಷ್ಟೋ ವಾನರರು ಕೂಡಾ ದಿವ್ಯೌಷಧಗಳ ಗಾಳಿ ತಾಗಿದ ಕೂಡಲೇ ಬದುಕಿ ಎದ್ದರು. ಅವರ ಶರೀರದ ಗಾಯಗಳೂ ಮಾಯವಾಗಿದ್ದುವು.

ಅದರಂತೆ ಔಷಧದ ಗಾಳಿಯಿಂದ ಸತ್ತುಬಿದ್ದ ರಾಕ್ಷಸರು ಕೂಡಾ ಬದುಕಿ ಬಿಡುತ್ತಿದ್ದರು. ಆದರೆ ರಾವಣನು ಎಲ್ಲಿಯೂ ರಾಕ್ಷಸರ ಶರೀರವನ್ನು ಹಾಗೆಯೇ ಬಿಟ್ಟಿರಲಿಲ್ಲ. ಯುದ್ಧದಲ್ಲಿ ಸತ್ತುಹೋದ ರಾಕ್ಷಸರೆಲ್ಲರನ್ನೂ ರಾವಣನು, ತನ್ನ ಪರಾಭವವು ರಹಸ್ಯವಾಗಿರಿಸಲಿಕ್ಕಾಗಿ, ಸಮುದ್ರದಲ್ಲಿ ಎತ್ತಿ ಹಾಕಿಸಿ ಬಿಟ್ಟಿದ್ದನು.

ಔಷಧಿಗಳಿಂದಾಗಬೇಕಾದ ಕೆಲಸವು ತೀರಿದ ಕೂಡಲೇ ಜಾಂಬವಂತನ ಅಪ್ಪಣೆಯಂತೆ ಹನುಮಂತನು ಆ ಬೆಟ್ಟದ ಶಿಖರವನ್ನು ಹೊತ್ತುಕೊಂಡು ಹೋಗಿ ಯಥಾ ಸ್ಥಾನದಲ್ಲಿಟ್ಟು, ಮತ್ತೆ ವಾಯುವೇಗದಿಂದ ರಾಮಲಕ್ಷ್ಮಣರ ಬಳಿಗೆ ತಿರುಗಿಬಂದನು. ಆಮೇಲೆ ಸುಗ್ರೀವನು ಹನುಮಂತನೊಂದಿಗೆ,



"ಈಗ ನಾವು ಇಮ್ಮಡಿ ಉತ್ಸಾಹದವರಾಗಿದ್ದೇವೆ. ಈ ಸ್ಥಿತಿಯಲ್ಲಿ ಸುಮ್ಮನಿರಬಾರದು. ಕುಂಭಕರ್ಣನೂ, ರಾವಣನ ಮಗಂದಿರೂ ಸತ್ತುಹೋದರು. ಆದುದರಿಂದ ರಾವಣನು ಈಗ ಯುದ್ಧಮಾಡುವ ಎತ್ತುಗಡೆಯಲ್ಲಿರಲಿಕ್ಕಿಲ್ಲ. ನಮ್ಮಲ್ಲಿ ಬಲಿಷ್ಠರಾದ ವಾನರರು ದೀವಿಟೀ ಹಚ್ಚಿಕೊಂಡು ಈ ರಾತ್ರಿಯಲ್ಲಿಯೇ ಲಂಕೆಯೊಳಗೆ ನುಗ್ಗಬೇಕು" ಎಂದನು.

ಅದರಂತೆ ಸೂರ್ಯನು ಮುಳುಗಿದ ಮೇಲೆ ಕತ್ತಲೆ ಚೆನ್ನಾಗಿ ಮುಸುಗಿದಾಗ ವಾನರವೀರರು ದೀವಿಟಿಗಳನ್ನು ಎತ್ತಿಕೊಂಡು ಧಿಮಿಧಿಮಿ ಹೊರಟರು. ಅವರ ಉತ್ಸಾಹವನ್ನೂ ವೇಗದ ಧಾವತಿಯನ್ನೂ ನೋಡಿ ಅಲ್ಲಲ್ಲಿ ದ್ವಾರಗಳಲ್ಲಿದ್ದ ಕಾವಲಿಗ ರಾಕ್ಷಸರು ಹೆದರಿ ಓಡಿಹೋದರು. ವಾನರರು ತಮ್ಮನ್ನು ಅಡ್ಡಿಪಡಿಸುವವರಾರೂ ಇಲ್ಲದೆ ನಗರದ ದ್ವಾರಗಳಿಗೂ ಬುರುಜುಗಳಿಗೂ ಬೀದಿಗಳಲ್ಲಿ ಕಂಡ ಕಂಡ ಮನೆಗಳಿಗೂ ಬೆಂಕಿ ಹಚ್ಚುತ್ತಾಹೋದರು. ಮನೆಗಳೂ ಮಂದಿರಗಳೂ ಅಸಂಖ್ಯಾತವಾಗಿ ಹೊತ್ತಿಕೊಂಡು ಅಗ್ನಿ ಮಾಲೆಗಳಾದುವು. ಮನೆಗಳೊಂದಿಗೆ ಮನೆಯೊಳಗಿನ ಅಮೂಲ್ಯ ವಸ್ತುಗಳೂ ಉರಿದು ಹೋಗುವುದನ್ನು ನೋಡುತ್ತಾ, ರಾಕ್ಷಸ ಕುಟುಂಬದವರು ಆರ್ತನಾದ ಮಾಡ ತೊಡಗಿದರು. ಈ ಬೆಂಕಿಯಿಂದ ಅನೇಕಮಂದಿ ರಾಕ್ಷಸರೂ ಸತ್ತರು.

ಸತ್ತುಹೋದ ವಾನರರೆಲ್ಲ ಮತ್ತೆ ಹೇಗೆ ಬದುಕಿ ಬಂದರೆಂದು ತಿಳಿಯದೆ, ನಿರ್ವಾಹತೋರದೆ, ರಾಕ್ಷಸರು ಮತ್ತೆ ಯುದ್ಧಕ್ಕೆ ಸಿದ್ಧರಾದರು. ಬೇಗ ಬೇಗನೆ ಇದ್ದಬದ್ದ ಸೈನ್ಯವನ್ನೆಲ್ಲ ಒಟ್ಟುಗೂಡಿಸಿದರು. ಈಗ ಅವರು ಲಂಕಾನಗರದೊಳಗೇ ವಾನರರನ್ನು ಇದಿರಿಸಬೇಕಾಗಿ ಬಂದಿತು.

ಸುಗ್ರೀವನು ಒಂದು ವಾನರರ ತಂಡವನ್ನು ನೋಡಿ, "ನೀವು ರಾವಣನ ಮನೆಯ ಸುತ್ತಲೂ ಮುತ್ತಿ ಯುದ್ಧಮಾಡಿರಿ" ಎಂದನು. ಅವನ ಆಜ್ಞೆಯ ಪ್ರಕಾರ ವಾನರರು ದೀವಿಟಿಗೆಗಳೊಂದಿಗೆ ತನ್ನ ಮಂದಿರದ ಬಾಗಿಲುಗಳಲ್ಲೆಲ್ಲ ನಿಂತಿರುವುದನ್ನು ನೋಡಿ, ರಾವಣನು ಕೋಪದಿಂದ ಕೆಂಡದಂತಾದನು. ಅವನು ಕುಂಭಕರ್ಣನ ಮಗಂದಿರಾದ ಕುಂಭ, ನಿಕುಂಭರನ್ನು ವಾನರರ ಮೇಲೆ ಯುದ್ಧಕ್ಕೆ ಕಳುಹಿಸಿದನು. ಕುಂಭ ನಿಕುಂಭರಿಗೆ ಸಹಾಯಕರಾಗಿ ಯೂಪಾಕ್ಷ, ಶೋಣಿತಾಕ್ಷ, ಪ್ರಜಂಘ, ಕಂಪನ ಎಂಬ ಮಹಾ ಮಹಾ ರಾಕ್ಷಸನಾಯಕರೂ ಹೊರಟರು.

ಉಭಯ ಪಕ್ಷಗಳಿಗೂ ಭಾರಿ ಹೋರಾಟ ಪ್ರಾರಂಭವಾಯಿತು. ಆ ಯುದ್ಧದಲ್ಲಿ ಅಂಗದನು ಕಂಪನನನ್ನು ಕೊಂದನು. ಅದೇ ವೇಗದಲ್ಲಿ ಅಂಗದನು ಶೋಣಿತಾಕ್ಷನ ಖಡ್ಗವನ್ನು ಕಿತ್ತುಕೊಂಡು, ಅದರಿಂದಲೇ ಅವನ ತಲೆಯನ್ನೂ ತುಂಡರಿಸಿ, ಬೇರೆ ರಾಕ್ಷಸರ ಮೇಲೆ ಧುಮುಕಿದನು. ಆಮೇಲೆ ಅಂಗದನ ಕೈಯಲ್ಲೇ ಪ್ರಜಂಘನ ಅವಸಾನವೂ ಆಯಿತು. ಮೈಂದನ ಕೈಯಲ್ಲಿ ಯೂಪಾಕ್ಷನೂ ಸತ್ತು ಬೀಳ

ಉಳಿದ ರಾಕ್ಷಸರು ಹಾಹಾಕಾರ ಮಾಡಿದರು. ಆಮೇಲೆ ಅಂಗದನು ಕುಂಭನೊಂದಿಗೆ ಸೆಣಸಾಡುತ್ತಾ ಅವನ ಪೆಟ್ಟಿಗೆ ತಾಳದೆ ಮೂರ್ಛೆ ಹೋಗಿ ಬಿದ್ದನು. ಅದನ್ನು ತಿಳಿದು ರಾಮನು ಅಂಗದನಿಗೆ ಸಹಾಯಕರಾಗಿ ಜಾಂಬವಂತ ಮೊದಲಾದವರನ್ನು ಕಳುಹಿಸಿಕೊಟ್ಟನು. ಆದರೆ ಅವರಿಗೆ ಕುಂಭನು ಪ್ರಯೋಗಿಸುವ ಬಾಣಗಳೆಡೆಯಲ್ಲಿ ಮುಂದುವರಿಯಲಾಗಲಿಲ್ಲ. ಅದನ್ನು ನೋಡಿ ಸುಗ್ರೀವನು, ಕುಂಭನ ಬಾಣಗಳನ್ನು ಸಹಿಸುತ್ತ ರಭಸದಿಂದ ತೀರಾ ಸಮೀಪಕ್ಕೆ ಹೋಗಿ ಹಾರಿ ಕುಂಭನ ಕೈಯಲ್ಲಿದ್ದ ಧನುಸ್ಸನ್ನು ಎಳೆದುಕೊಂಡು ಮುರಿದು ಕೆಡವಿದನು. ಆಮೇಲೆ ಅವನೊಂದಿಗೆ ಮುಷ್ಟಿಯುದ್ಧಕ್ಕೆ ತೊಡಗಿದನು. ಆ ಮಲ್ಲಯುದ್ಧದಲ್ಲಿ ಕಡೆಗೆ ಸುಗ್ರೀವನ ಕೈಯಲ್ಲಿ ಕುಂಭನು ಸತ್ತುಬಿದ್ದು ತಣ್ಣಗಾದನು.

ತನ್ನ ಅಣ್ಣ ಸತ್ತುದನ್ನು ನೋಡಿ, ನಿಕುಂಭನಿಗೆ ಮಹಾ ಆಕ್ರೋಶವೆದ್ದಿತು. ಅವನು ತನ್ನ ಕೈಯಲ್ಲಿದ್ದ ಪರಿಘವನ್ನು ಗಿರಿಗಿರಿ ತಿರುಗಿಸುತ್ತ, ಇದಿರಿನಲ್ಲಿ ಹನುಮಂತನ ಎದೆಗೆ ಗುರಿಯಿಟ್ಟು ಬಿಸುಟನು. ಅದು ಹನುಮಂತನ ಎದೆಗೆ ತಾಗಿ ತುಂಡು ತುಂಡಾಗಿ ಕೆಳಗೆ ಬಿದ್ದಿತು. ಹನುಮಂತನಿಗೂ ಭಾರಿ ಪೆಟ್ಟಾಗಿತ್ತು. ಆ ಕೋಪದಿಂದ ಹನುಮಂತನು ಮುಷ್ಟಿ ಬಿಗಿದು ನಿಕುಂಭನ ಎದೆಯ ಮೇಲೆ ಬಲವಾಗಿ ತಿವಿದನು.

ಆ ಪೆಟ್ಟಿಗೆ ನಿಕುಂಭನು ಮೂಗು ಬಾಯಿಗಳಿಂದ ವಿಪರೀತ ನೆತ್ತರು ಕಾರುತ್ತ ಮೂರ್ಛೆ ಹೋಗಿ ಬಿದ್ದನು. ಬಿದ್ದ ಸ್ವಲ್ಪ ಹೊತ್ತಿನೊಳಗೆ ತಿರುಗಿ ಎದ್ದು ಅತ್ಯಾಕ್ರೋಶದಿಂದ ನೆಲಬಿರಿಯುವಂತೆ ಗರ್ಜಿಸಿ ಹನುಮಂತನ ಮೇಲೆ ಎರಗಿದನು. ಹನುಮಂತನೂ ಅವನ ಪಟ್ಟಿಗೆ ಸಿಕ್ಕದೆ ತಾನೂ ಹಾರಿ ಅವನ ಕೊರಳನ್ನು ಅಮುಕಿ ಹಿಡಿದು ತಿರುಗಿಸಿ ತಲೆಯನ್ನು ಕಿತ್ತು ಎಗೆದು ನೆಲಕ್ಕೆ ಅಪ್ಪಳಿಸಿಬಿಟ್ಟನು. ಈ ರೀತಿಯಾಗಿ ಮಹಾ ಪ್ರತಾಪಶಾಲಿಗಳಾದ ಕುಂಭನಿಕುಂಭರು



ಸತ್ತರೆಂದು ಕೇಳಿ ರಾವಣನೂ ತುಂಬ ದುಃಖಿಸಿದನು. ಆಗ ಖರನ ಮಗನಾದ ಮಕರಾಕ್ಷನು ತಾನು ಯುದ್ಧಕ್ಕೆ ಹೋಗುವೆನೆಂದು ಹೇಳಿ ಅಪ್ಪಣೆ ಪಡೆದು, ನೇರಾಗಿ ರಾಮನ ಮುಂದೆಯೇ ಹೋಗಿ, ಒಂದೇ ಒಂದು ರಾಮಬಾಣದಿಂದ ರಣರಂಗಕ್ಕೆ ಬಲಿಯಾದನು.

ಈ ವಾರ್ತೆ ಕೇಳಿದ ಕೂಡಲೇ ರಾವಣನು ಕೋಪದಿಂದ ಹಲ್ಲು ಕಡಿಯುತ್ತ ಇಂದ್ರಜಿತ್ತುವನ್ನು ನೋಡಿದನು. ಅದರ ಅರ್ಥ ಇನ್ನು ನಿನ್ನ ಹೊರತು ಬೇರೊಬ್ಬರಿಲ್ಲ ಎಂಬಂತಿತ್ತು. ತಂದೆಯ ಭಾವವನ್ನರಿತ ಇಂದ್ರಜಿತ್ತು, ತಂದೆಯ ಅಪ್ಪಣೆ ಪಡೆದು ಯುದ್ಧಕ್ಕೆ ಹೊರಟನು. ಯುದ್ಧಕ್ಕೆ ಮೊದಲು ಪದ್ಧತಿಯಂತೆ ರಣರಂಗದ ಹತ್ತಿರ ಹೋಮಕ್ಕೆ ಅಣಿಯಾದನು. ಅವನ ಸಂಗತಿಯನ್ನು ತಿಳಿದಿದ್ದ ರಾಕ್ಷಸ ಸ್ತ್ರೀಯರು ಋತ್ವಿಜರು ಧರಿಸುವಂತಹ ಕೆಂಪುಬಣ್ಣದ ತಲೆಗೆ ಕಟ್ಟುವ ಬಟ್ಟೆಗಳನ್ನು ಸಿದ್ಧಪಡಿಸಿದರು. ಅಲ್ಲಿ ಇಂದ್ರಜಿತ್ತು ಮಾಡಿದ ಹೋಮವು ಅತಿ



ವಿಚಿತ್ರವಾಗಿತ್ತು. ಅವನು ದರ್ಭೆಗಳಿಗೆ ಬದಲಾಗಿ ಆಯುಧಗಳನ್ನೂ. ಸ್ರುಕ್‌ಸ್ರುವಗಳಿಗೆ ಕಬ್ಬಿಣದ ಪಾತ್ರಗಳನ್ನೂ ಉಪಯೋಗಿಸಿದನು. ಹೋಮಕ್ಕೆ ಕೂಡಿದ ಋತ್ವಿಜರು ಕೆಂಪು ಬಟ್ಟೆಗಳನ್ನು ಧರಿಸಿಕೊಂಡಿದ್ದರು. ಇಂದ್ರಜಿತ್ತು ಕಪ್ಪು ಮೇಕೆಯ ಕಂಠವನ್ನು ಕಡಿದು ರಕ್ತಧಾರೆ ಸುರಿದು ಹೋಮ ಮಾಡಿದನು. ವಿಜಯ ಸೂಚಕವಾಗಿ ಅಗ್ನಿ ಹೊಗೆಯಿಲ್ಲದೆಯೇ ಧಗಧಗಿಸಿತು. ಹೀಗೆ ವಿಚಿತ್ರ ರೀತಿಯಲ್ಲಿ ಹೋಮವನ್ನು ಮುಗಿಸಿ, ದೇವದಾನವ ರಾಕ್ಷಸರಿಗೆ ತರ್ಪಣಗಳನ್ನು ಕೊಟ್ಟು, ಮಾಯವಾಗುವ ಶಕ್ತಿ ಹೊಂದಿರುವ ತನ್ನ ಅದ್ಭುತವಾದ ರಥದ ಮೇಲೇರಿದನು.

ಅಲ್ಲಿಂದ ಇಂದ್ರಜಿತ್ತು ಅಂತರ್ಧಾನನಾಗಿ ಯುದ್ಧರಂಗಕ್ಕೆ ಬಂದನು. ಅವನು ವಾನರಸೇನೆಯ ನಡುವೆ ರಾಮಲಕ್ಷ್ಮಣರನ್ನು ಗುರುತಿಸಿ ಅವರ ಮೇಲೆ ಒಮ್ಮೆಗೇ ಬಾಣ ವರ್ಷಣ ಮಾಡಲು ತೊಡಗಿದನು. ಜಾಗರೂಕರಾಗಿದ್ದ ರಾಮಲಕ್ಷ್ಮಣರು, ತಮ್ಮ ಎಡೆಬಿಡದ ಬಾಣಗಳಿಂದ ಆಕಾಶವನ್ನೆಲ್ಲಾ ಮುಚ್ಚಿದರೂ ಒಂದು ಬಾಣ ಕೂಡಾ ಇಂದ್ರಜಿತ್ತುವಿಗೆ ತಾಗಲಿಲ್ಲ. ಅವನ ಬಾಣಗಳು ರಾಮನ ಶರೀರದ ಎಲ್ಲಾ ಭಾಗಗಳನ್ನೂ ತಾಗಿ ನೋಯಿಸುತ್ತಿದ್ದುವು. ರಾಮಲಕ್ಷ್ಮಣರು ತಮ್ಮ ಬಾಣಗಳಿಂದ ಇಂದ್ರಜಿತ್ತುವಿನ ಬಾಣಗಳನ್ನು ಬಹಳ ಮಟ್ಟಿಗೆ ಖಂಡಿಸುತ್ತಲೇ ಇದ್ದರು. ಆದರೂ ಇಂದ್ರಜಿತ್ತು ಮೇಲಿಂದ ಮೇಲೆ ಪ್ರಯೋಗಿಸುವ ಬಾಣಗಳು ವಾನರಸೇನೆಯನ್ನು ತತ್ತರಗೊಳಿಸುತ್ತಿದ್ದುವು.

ಲಕ್ಷ್ಮಣನಿಗೆ ಬಹಳ ಕೋಪಬಂದು, "ಅಣ್ಣಾ, ನಾನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ರಾಕ್ಷಸರೆಲ್ಲರನ್ನೂ ಕೊಂದುಬಿಡುತ್ತೇನೆ." ಎಂದನು. ರಾಮನು ಅದಕ್ಕೆ ಒಪ್ಪದೆ, "ತಮ್ಮಾ, ಒಬ್ಬನಿಗೋಸ್ಕರ ಭೂಮಿಯ ಮೇಲಿರುವ ರಾಕ್ಷಸರೆಲ್ಲರನ್ನೂ ಕೊಲ್ಲುವೆನೆನ್ನುವುದು ಭಾವ್ಯವಲ್ಲ. ಸಂಕಲ್ಪಸಿದ್ಧಿಯಂತಹ ಬ್ರಹ್ಮಾಸ್ತ್ರವನ್ನು ದುರುಪಯೋಗ ಪಡಿಸಬಾರದು. ಆಮೇಲೆ ಅದನ್ನು ಉಪಯೋಗಿಸುವ ಅರ್ಹತೆಯೂ ತಪ್ಪಿಹೋಗುತ್ತದೆಂಬುದನ್ನು ನೆನಪಿಡು. ನಾವೀಗ ಬೇರೆ ದಿವ್ಯಾಸ್ತ್ರಗಳಿಂದಲೇ ಯುದ್ಧವನ್ನು ನೆರವೇರಿಸೋಣ" ಎಂದನು.

ಅಷ್ಟರಲ್ಲಿ ಇಂದ್ರಜಿತ್ತುವಿಗೆ ಒಂದು ಹೊಸ ಆಲೋಚನೆ ಬಂದಿತು. ಕೂಡಲೇ ಅವನು ಯುದ್ಧಭೂಮಿಯಿಂದ ಲಂಕಾ ನಗರದೊಳಗೆ ಹೋಗಿ, ಮಾಯಾ ಸೀತೆಯನ್ನು ನಿರ್ಮಿಸಿ ಅವಳನ್ನು ತನ್ನ ರಥದ ಮೇಲಿಟ್ಟುಕೊಂಡು, ಮತ್ತೆ ಯುದ್ಧಭೂಮಿಗೆ ಬಂದನು. ಆ ಮಾಯಾ ಸೀತೆಯನ್ನು ರಾಮಲಕ್ಷ್ಮಣರ ಕಣ್ಣೆದಿರಿಗೇ ಕೊಂದು, ಅವರಿಗೆ ಮಾನಸಿಕ ದೌರ್ಬಲ್ಯವನ್ನುಂಟುಮಾಡಬೇಕೆಂದು ಆಲೋಚಿಸಿದ್ದನು.

ಹೋದ ಇಂದ್ರಜಿತ್ತು ಮತ್ತೆ ಯುದ್ಧಭೂಮಿಗೆ ಮರಳುವುದನ್ನು ನೋಡಿ ಹನುಮಂತನು ದೊಡ್ಡ

ದೊಂದು ಬಂಡೆಯನ್ನೆತ್ತಿಕೊಂಡು ಅವನ ಮುಂದೆ ಬಂದನು. ಅವನ ಹಿಂದೆಯೂ ಅನೇಕ ವಾನರ ವೀರರು ಬಂಡೆಗಲ್ಲುಗಳನ್ನು ಬೀಸಲು ಸಿದ್ಧರಾಗಿ ಹಿಡಿದುಕೊಂಡು ಬಂದರು. ಆದರೆ ಅವರ ಕಣ್ಣಿಗೆ ಬಿದ್ದ ದೃಶ್ಯ ಅವರೆಲ್ಲರನ್ನೂ ನಡುಗಿಸುವಂತಿತ್ತು. ಇಂದ್ರಜಿತ್ತುವಿನ ರಥದ ಮೇಲೆ ಕೃಶಳಾಗಿಹೋದ ಸೀತೆ ಅಳುತ್ತಾ ದಿಕ್ಕು ದಿಕ್ಕು ನೋಡುತ್ತಿದ್ದಾಳೆ. ಅದನ್ನು ನೋಡಿ ಹನುಮಂತನಿಗೆ ಕಂಬನಿ ತುಂಬಿ ಸೂಸಿತು. ಅವನು ಉಳಿದ ವಾನರರನ್ನು ನೋಡಿ, "ಇಂದ್ರಜಿತ್ತು ತನ್ನ ರಥದ ಮೇಲೆ ಸೀತಾದೇವಿಯನ್ನು ಏತಕ್ಕಾಗಿ ತಂದಿದ್ದಾನೆ ?" ಎಂದು ಕೇಳಿದನು. ವಾನರರು ಏನು ಉತ್ತರಕೊಡಬಲ್ಲರು ?

ಮರು ನಿಮಿಷದಲ್ಲಿ ಹನುಮಂತನು ದುಃಖವನ್ನು ನುಂಗಿ ಕೋಪದಿಂದ ಹಲ್ಲು ಕಡಿಯುತ್ತ ಇಂದ್ರಜಿತ್ತುವಿನ ಮೇಲೆ ಏರಿ ಹೋಗತೊಡಗಿದನು. ವಾನರಸೇನೆ ತನ್ನ ಕಡೆಗೆ ಬರುವುದನ್ನು ನೋಡಿ ಇಂದ್ರಜಿತ್ತು ತನ್ನ ಕತ್ತಿಯಿಂದ ಮಾಯಾ ಸೀತೆಯ ಕೊರಳನ್ನು ಗೀರತೊಡಗಿದನು. ಅವಳ ಜುಟ್ಟು ಹಿಡಿದು ಹೊಡೆಯತೊಡಗಿದನು. ಇದೇನು ಚಿತ್ರಹಿಂಸೆ ಮಾಡುತ್ತಿದ್ದಾನೆಯೇ ?

ಅದನ್ನು ನೋಡಿ ಹನುಮಂತನು ದುಃಖ ತಡೆಯಲಾಗದೆ, "ಎಲೋ, ಕ್ರೂರ ಕರ್ಮಿಯೇ ? ಮಹಾಪಾಪೀ ! ಇದೇನು ಕೆಲಸ ನಿನ್ನದು ? ಹೀಗೆ ಮಾಡಲು ನಿನಗೆ ನಾಚಿಕೆಯಾಗುವುದಿಲ್ಲವೇ ? ನೀನು ಸೀತೆಯನ್ನು ಕೊಂದುಗಿಂದುಬಿಟ್ಟರೆ ಮರುಕ್ಷಣದಲ್ಲಿ ನೀನೂ ಸಾಯುವಿ ! ಲಂಕಾ ನಗರವೂ ಮುಳುಗುವುದು !" ಎಂದನು.

ಇಂದ್ರಜಿತ್ತುವಿನ ಮೇಲೆ ಬಂದ ವಾನರಸೇನೆಯನ್ನು ರಾಕ್ಷಸರ ಸೇನೆ ಇದಿರಿಸಿತು. ಇಂದ್ರಜಿತ್ತು ಹನುಮಂತನೊಂದಿಗೆ, "ಈ ಸೀತೆಗಾಗಿಯೇ ಅಲ್ಲವೇ ನೀನೂ ಸುಗ್ರೀವನೂ ರಾಮನೂ ಎಲ್ಲರೂ ಲಂಕೆಗೆ



ಬಂದಿದ್ದೀರಿ ? ಅವಳನ್ನೀಗ ನಿಮ್ಮೆಲ್ಲರ ಕಣ್ಣೆದಿರೇ ಕೊಂದು ಹಾಕಿಬಿಡುತ್ತೇನೆ. ಆಮೇಲೆ ಜೀವಚ್ಛವರಾದ ರಾಮಲಕ್ಷ್ಮಣ ನೀನು ಸುಗ್ರೀವ ದ್ರೋಹಿಯಾದ ಆ ವಿಭೀಷಣ ಎಲ್ಲರನ್ನೂ ಕೊಂದುಬಿಡುತ್ತೇನೆ. ಸ್ತ್ರೀಯರನ್ನು ಕೊಲ್ಲಬಾರದೆಂದು ಹೇಳುವೆಯಾದರೂ, ಶತ್ರುಗಳಿಗೆ ಸಂಕಟವನ್ನುಂಟುಮಾಡುವ ಯಾವ ಕಾರ್ಯವನ್ನಾದರೂ ಮಾಡಬಹುದು." ಎಂದನು.

ಹೀಗೆ ಹೇಳಿ ಮುಗಿಸಿದವನೇ ಇಂದ್ರಜಿತ್ತು ಮಾಯಾ ಸೀತೆಯನ್ನು ತನ್ನ ಖಡ್ಗದಿಂದ ಕಡಿದು ತುಂಡು ತುಂಡು ಮಾಡುತ್ತ ಸಿಂಹನಾದ ಮಾಡಿದನು. ಕಣ್ಣೆದಿರು ಕಂಡ ಭಯಂಕರ ದೃಶ್ಯವನ್ನೂ, ಅವನ ಸಿಂಹನಾದವನ್ನೂ ಕೇಳಿ ವಾನರರು ಹೆದರಿ ಓಡಿ ಹೋಗತೊಡಗಿದರು.

ಹನುಮಂತನು ಅವರನ್ನು ತಡೆಯುತ್ತ, "ಓಡಿ ಹೋಗುವುದರಿಂದೇನು ಪ್ರಯೋಜನ ? ನಿಮ್ಮ



ಪ್ರತಾಪಗಳೂ ಕಾರ್ಯ ಶೂರತ್ವವೂ ಏನಾಯಿತು ? ಶೂರರಾದವರು ಯುದ್ಧರಂಗಕ್ಕೆ ಬೆನ್ನು ಹಾಕುತ್ತಾರೆಯೋ ? ಬನ್ನಿ ಬನ್ನಿ ! " ಎಂದು ಅವರನ್ನು ಹಿಂದಕ್ಕೆ ಕರೆದು, ರೌದ್ರಾವೇಶಗೊಂಡು ಬಂದ ವಾನರವೀರರೊಂದಿಗೆ ಯುದ್ಧಕ್ಕೆ ತೊಡಗಿದನು.

ಅವನು ಇಂದ್ರಜಿತ್ತುವಿನ ರಥದ ಮೇಲೆ ಬ್ರಹ್ಮಾಂಡದಂಥ ಶಿಲಾಖಂಡವನ್ನು ಬಿಸುಟನು. ಇಂದ್ರಜಿತ್ತುವಿನ ಸಾರಥಿ ಯುಕ್ತಿಯಿಂದ ರಥವನ್ನು ತಪ್ಪಿಸಿರದಿದ್ದರೆ ರಥವು ಪುಡಿಯಾಗುತಿತ್ತು. ಈಗ ಹನುಮಂತನು ಬಿಸುಟ ಕಲ್ಲಿನ ಅಡಿಯಲ್ಲಿ ಸಿಕ್ಕು ಅನೇಕ ಮಂದಿ ರಾಕ್ಷಸರು ಜಜ್ಜಿ ಸತ್ತರು. ವಾನರರು ತುಂಬ ವಿಜೃಂಭಿಸಿ ರಾಕ್ಷಸರನ್ನು ಕೊಲ್ಲತೊಡಗಿದರು. ಇಂದ್ರಜಿತ್ತುವಿನ ರಥದ ಮೇಲೆ ಶಿಲಾವರ್ಷಣವೇ ಸುರಿಯಿತು. ಇಂದ್ರಜಿತ್ತುವಿನ ರಥವು ಚಕ್ರಾಕಾರವಾಗಿ ಸುತ್ತುತ್ತ ತಪ್ಪಿಸಿಕೊಳ್ಳುತ್ತಿರಲು, ಇಂದ್ರಜಿತ್ತು ಬಹು ಕೋಪದಿಂದ ಎಡೆಬಿಡದ ಬಾಣಗಳಿಂದ ವಾನರರನ್ನು ಕೊಲ್ಲತೊಡಗಿದನು. ಅದನ್ನು ಲಕ್ಷಿಸದೆ ಹನುಮಂತನು ರಾಕ್ಷಸರ ಸೇನೆಯನ್ನು ಹಿಂದ ಹಿಂದಕ್ಕೆ ಅಟ್ಟುತ್ತ, ತನ್ನವರನ್ನು ನೋಡಿ, " ಈ ರಾಕ್ಷಸಸೇನೆಯೊಂದಿಗೆ ನಮಗೇನು ಕೆಲಸ ? ನಾವು ಸೀತೆಗಾಗಿ ಬಂದವರು. ಆ ಸೀತೆ ಸತ್ತುಹೋದಳು. ಈ ವಾರ್ತೆಯನ್ನು ರಾಮನಿಗೂ ಸುಗ್ರೀವನಿಗೂ ಹೇಳಿ, ಅವರು ಏನು ಹೇಳುವರೋ ಹಾಗೆ ಮಾಡೋಣ. ನಡೆಯಿರಿ " ಎಂದನು.

ಹೀಗೆಂದು ಹನುಮಂತನು ಉಳಿದ ವಾನರರೊಂದಿಗೆ ಹಿಂದಿರುಗಿ ಹೊರಟನು. ಹನುಮಂತನು ಹಿಂದಿರುಗಿ ಹೋಗುವುದನ್ನು ನೋಡಿ, ಇಂದ್ರಜಿತ್ತು, ಇನ್ನೊಂದು ಹೋಮಮಾಡಿ, ಇನ್ನಷ್ಟು ಶಕ್ತಿ ಸಂಪಾದಿಸಲಿಕ್ಕಾಗಿ ನಿಕುಂಭಿಳೆ ಎಂಬ ಚೈತ್ಯ ವನದ ಕಡೆಗೆ ಹೋದನು. ಅಲ್ಲಿ ಅವನು ಅಗ್ನಿಯಲ್ಲಿ ರಕ್ತಮಾಂಸ, ಮಜ್ಜೆ ಮೇಧಸ್ಸುಗಳಿಂದ ಮಂತ್ರವತ್ತಾಗಿ ಹೋಮಮಾಡಲು ಪ್ರಾರಂಭ ಮಾಡಿದನು.

ಇಷ್ಟರಲ್ಲಿ ರಾಮನು ವಾನರರಿಗೂ ರಾಕ್ಷಸರಿಗೂ ಭಾರಿ ಯುದ್ಧವು ನಡೆಯುವುದನ್ನು ತಿಳಿದು, ಅದು ಹನುಮಂತನು ಮಾಡುವ ಯುದ್ಧವಾಗಿರಬೇಕೆಂದು ಜಾಂಬವಂತನೊಂದಿಗೆ ಹೇಳುತ್ತಿದ್ದನು. ರಾಮನ ಅಭಿಪ್ರಾಯದಂತೆ ಜಾಂಬವಂತನು ಹನುಮಂತನಿಗೆ ಸಹಾಯವಾಗಿ ಅತ್ತಕಡೆಗೆ ಹೋದನು.

ಜಾಂಬವಂತನೊಂದಿಗೆ ತನಗಾಗಿ ಬರುವ ಭಲ್ಲೂಕ ಸೇನೆಯನ್ನು ನೋಡಿ ಹನುಮಂತನು ಅವರನ್ನು ತನ್ನೊಂದಿಗೇ ಹಿಂದಿರುಗಿಸಿಕೊಂಡು ರಾಮನ ಬಳಿಗೆ ಬಂದನು. ಹನುಮಂತನು ದುಃಖದಿಂದ ಕಣ್ಣೀರು ಸುರಿಸುತ್ತ ಇಂದ್ರಜಿತ್ತು ಸೀತೆಯನ್ನು ಭಯಂಕರ ರೀತಿಯಲ್ಲಿ ಕೊಂದುಹಾಕಿದ ಸಂಗತಿಯನ್ನು ಹೇಳಿದನು. ಆ ವಾರ್ತೆಯನ್ನು ಕೇಳಿದ ಕೂಡಲೆ ರಾಮನು ಕಂದಿಕುಂದಿ ಕುಸಿದುಬಿಟ್ಟನು. ಅದನ್ನು ನೋಡಿ ಲಕ್ಷ್ಮಣನೂ, ಉಳಿದ ವಾನರಪ್ರಮುಖರೂ

ದುಃಖಿಸತೊಡಗಿದರು. ದೂರದೂರದಲ್ಲಿದ್ದ ವಾನರರೆಲ್ಲಾ ರಾಮಲಕ್ಷ್ಮಣರ ಬಳಿಗೆ ಬಂದು ಸೇರಿದರು. ಮೂರ್ಛೆಹೋದ ರಾಮನ ಮುಖದ ಮೇಲೆ ಸುಗಂಧಜಲವನ್ನು ಚೆಲ್ಲಿದರು.

ಲಕ್ಷ್ಮಣನು ರಾಮನನ್ನು ಆಲಿಂಗಿಸಿಕೊಂಡು, ದುಃಖಗದ್ಗದಿತ ಕಂಠದಿಂದ ಹೀಗೆಂದನು: "ಅಣ್ಣಾ, ರಾಮಾ, ನೀನು ಧರ್ಮಮಾರ್ಗವನ್ನೇ ಅವಲಂಬಿಸಿ, ಪಿತೃವಾಕ್ಯಪರಿಪಾಲಕನೆಂದು ಖ್ಯಾತನಾದೆ. ರಾಜ್ಯವನ್ನು ತ್ಯಾಗಮಾಡಿ ವನವಾಸಕ್ಕೆ ಬಂದೆ. ಕೈಕೇಯಿಯೂ ದಶರಥರ ಮೇಲೆ ಯಾವ ಬಗೆಯ ಹಗೆಯನ್ನೂ ಇಟ್ಟುಕೊಳ್ಳಲಿಲ್ಲ. ಹೀಗಿರುವ ನಿನಗೇ ಎಲ್ಲಾ ಬಗೆಯ ಕಷ್ಟಗಳೂ ಬಂದಿವೆ, ಬರುತ್ತಿವೆ. ನಿನ್ನ ಧರ್ಮವು ನಿನ್ನನ್ನು ಸ್ವಲ್ಪ ಕೂಡಾ ಕಾಪಾಡಲಿಲ್ಲ. ಆದುದರಿಂದ ಈ ಧರ್ಮಗಿರ್ಮಗಳೆಲ್ಲ ನಿಷ್ಪ್ರಯೋಜನವೇ ಸರಿ. ಧರ್ಮವು ರಕ್ಷಿಸುತ್ತದೆನ್ನುವುದು ಸುಳ್ಳು..." ಎಂದು ಹೇಳುತ್ತಿರುವಾಗ, ಅವರ ಬಳಿಗೆ ವಿಭೀಷಣನು ಬಂದನು.

ಅವನು ರಾಮಲಕ್ಷ್ಮಣರ ಪರಿಸ್ಥಿತಿಯನ್ನು ನೋಡಿ, ಸೀತೆಯನ್ನು ಇಂದ್ರಜಿತ್ತು ವಧಿಸಿದನೆಂಬ ಸಂಗತಿಯನ್ನು ಕೇಳಿ, ಹೀಗೆಂದನು: "ರಾಮಾ, ಈ ವಾರ್ತೆ ನಂಬುವಂತಹುದಲ್ಲ. ಸೀತೆಯನ್ನು ನಿನಗೆ ಒಪ್ಪಿಸಲಿಕ್ಕೇ ಒಪ್ಪದಿದ್ದ ರಾವಣನು ಸೀತೆಯನ್ನು ವಧಿಸಲು ಒಪ್ಪುವುದುಂಟೇ? ಅವನು ಯಾವ ಪರಿಸ್ಥಿತಿಯಲ್ಲಾದರೂ ಸೀತೆಯನ್ನು ಬಿಡಲು ಒಪ್ಪಲಾರ. ಅವಳಿಗೆ ಕೇಡು ಬರುವಂತೆಯೂ ಮಾಡಲಾರ. ಇಂದ್ರಜಿತ್ತುವಿನ ಸ್ವಂತಬುದ್ಧಿಯ ಮಾಯಾಕಾರ್ಯವೇ ಇದು. ಅವನು ಮುಖ್ಯವಾದೊಂದು ಹೋಮಕ್ಕೆ ನಿಕುಂಭಿಳೆಯ ಚೈತ್ಯವನಕ್ಕೆ ಹೋಗಿದ್ದಾನೆ. ಆ ಸಮಯದಲ್ಲಿ ವಾನರರು ತನ್ನ ಹೋಮಕ್ಕೆ ವಿಘ್ನಮಾಡುವರೆಂದುಕೊಂಡು, ಅವರನ್ನೆಲ್ಲ ದುಃಖದಲ್ಲಿ ಮುಳುಗಿಸಿ ಸುಮ್ಮನಿರಿಸಲು ಮಾಯಾಸೀತೆಯನ್ನು ನಿರ್ಮಿಸಿ ವಧಿಸಿ ಹೋಗಿದ್ದಾನೆ. ಅವನು ಈಗ ತಲೆ ಹಾಕಿದ ಹೋಮವನ್ನು ನಿರ್ವಿಘ್ನವಾಗಿ ಮಾಡಿ ಮುಗಿಸಿದ ಮೇಲೆ ದೇವತೆಗಳೆಲ್ಲ ಒಂದಾಗಿ ಬಂದರೂ ಅವನನ್ನು ಜಯಿಸಲು ಸಾಧ್ಯವಿಲ್ಲ. ಆದುದರಿಂದ ನಾವೀಗ ತ್ವರೆಮಾಡುವ ಅಗತ್ಯವಿದೆ. ಅವನ ಹೋಮ ಪೂರ್ತಿಯಾಗುವುದಕ್ಕೆ ಮೊದಲೇ ನಾವು ಸೈನ್ಯದೊಂದಿಗೆ ನಿಕುಂಭಿಳೆಗೆ ಹೋಗಬೇಕು. ನೀನು ನಿಶ್ಚಿಂತೆಯಾಗಿ ಇಲ್ಲಿಯೇ ಇರು. ಲಕ್ಷ್ಮಣನುಮಾತ್ರ ನಮ್ಮೊಂದಿಗೆ ಬರಲಿ. ಲಕ್ಷ್ಮಣನು ಇಂದ್ರಜಿತ್ತುವಿನ ಹೋಮಕ್ಕೆ ವಿಘ್ನವನ್ನುಂಟುಮಾಡಿ, ಮುಖಾಮುಖೀ ಯುದ್ಧಕ್ಕೆ ಅವನು ನಿಲ್ಲುವಂತೆ ಮಾಡಿದರೆ, ಬ್ರಹ್ಮನ ವರವು ನಿಜವಾಗುವಂತಾಗಿ ಲಕ್ಷ್ಮಣನ ಕೈಯಲ್ಲಿ ಅವನು ಸಾಯುತ್ತಾನೆ."



28-8